# "ಎಂ. ವಿ. ಶ್ರೀನಿವಾಸ್ ರವರ ಬದುಕು ಬರಹ"

(ಚರಿತ್ರೆ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ ಪಡಿಸಿದ
ಎಂ.ಫಿಲ್ ನಿಬಂಧ)


ಸಂಶೋಧಕರು

**ಅಜೀಮುಲ್ಲಾ**

ಎಂ.ಎ., ಡಿಪ್ಲೊಮಾ ಇನ್ ಎಪಿಗ್ರಫಿ

ಚರಿತ್ರೆ ವಿಭಾಗ
ಕರ್ನಾಟಕ ಸಂಘ (ರಿ)
ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ
ಮಂಡ್ಯ - 571401

ಮಾರ್ಗದರ್ಶಕರು

**ಡಾ. ಜಿ.ಎಸ್. ಪುಟ್ಟಸ್ವಾಮಿ**

ಎಂ.ಎ., ಪಿಎಚ್.ಡಿ

ಸಹ ಪ್ರಾಧ್ಯಾಪಕರು
ಇತಿಹಾಸ ವಿಭಾಗ
ವಿಶ್ವೇಶ್ವರ ಪುರ, ಕಲೆ ಮತ್ತು ವಾಣಿಜ್ಯ ಕಾಲೇಜು
ಕೆ.ಆರ್.ರಸ್ತೆ, ಬೆಂಗಳೂರು-04


**2011-2012**


ಕರ್ನಾಟಕ ಸಂಘ (ರಿ)
ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ
ಮಂಡ್ಯ-571401

# ಮಾರ್ಗದರ್ಶಕರ ಪ್ರಮಾಣ ಪತ್ರ

"ಎಂ.ವಿ. ಶ್ರೀನಿವಾಸ್ ರವರ ಬದುಕು ಬರಹ" ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ ಪದವಿಗಾಗಿ ಶ್ರೀ ಅಜಿಮುಲ್ಲಾ ರವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

B S Puttaswamy

ಸ್ಥಳ : ಮೈಸೂರು

ದಿನಾಂಕ: 29-06-2012

ಡಾ. ಬಿ.ಎಸ್. ಪುಟ್ಟಸ್ವಾಮಿ
ಎಂ.ಎ. ಪಿಎಚ್.ಡಿ.,
ಸಹಾಯಕ ಪ್ರಾಧ್ಯಾಪಕರು
ಇತಿಹಾಸ ವಿಭಾಗ
ವಿಶ್ವೇಶ್ವರಪುರ, ಕಲೆ ಮತ್ತು ವಾಣಿಜ್ಯ ಕಾಲೇಜು
ಬೆಂಗಳೂರು, ಕೆ.ಆರ್.ರಸ್ತೆ, ಬೆಂಗಳೂರು

**Dr. B.S. PUTTA SWAMY MA., Ph.D.,**
*Associate Professor of History*
Visveswarapuram College of Arts & Commerce,
K. R. Road, Bangalore - 560 004.



# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರದಲ್ಲಿ 2011–12 ನೇ ಸಾಲಿಗೆ ಚರಿತ್ರೆ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ಎಂ. ವಿ. ಶ್ರೀನಿವಾಸ್ ರವರ ಬದುಕು ಬರಹ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ. ಬಿ.ಎಸ್. ಪುಟ್ಟಸ್ವಾಮಿರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಂಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಲೀ, ಈ ನಿಬಂಧದಲ್ಲಿರುವ ಅಧ್ಯಯನಗಳನ್ನಾಗಲೀ ಬೇರೆ ಯಾವ ಗ್ರಂಥಗಳು, ನಿಯತಕಾಲಿಕೆಗಳಲ್ಲಿ ಪ್ರಕಟವಾಗಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾನಿಲಯವು ನೀಡುವ ಎಂ.ಫಿಲ್ ಪದವಿಗಾಗಿ ಈ ನಿಬಂಧವನ್ನು ಒಪ್ಪಿಸಿರುತ್ತೇನೆ.

ರ. ಸಂ. KRSMH – 00562

Azeemulla.

ಅಜೀಮುಲ್ಲಾ

ಸ್ಥಳ : ಮಂಡ್ಯ

ಸಂಶೋಧಕರು

ದಿನಾಂಕ: 29/6/2012

ಕರ್ನಾಟಕ ಸಂಘ (ರಿ)

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ,

ಮಂಡ್ಯ–571401

# ಪರಿವಿಡಿ

**ಅಧ್ಯಾಯ –1**

ಪೀಠಿಕೆ.

ಎ) ಅಧ್ಯಯನ ವಸ್ತುವಿನ ಮಹತ್ವ
ಬ) ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳ ಸಮೀಕ್ಷೆ
ಸಿ) ಸಂಶೋಧನಾ ವಿಧಾನ
ಡಿ) ಅಧ್ಯಯನಗಳ ವರ್ಗೀಕರಣ

**ಅಧ್ಯಾಯ–2**

ಎ) ಎಂ.ವಿ. ಶ್ರೀನಿವಾಸರವರ ಬಾಲ್ಯ, ವಿದ್ಯಾಭ್ಯಾಸ
ಬಿ) ವೃತ್ತಿ ಜೀವನ ಬೋಧಕರಾಗಿ

**ಅಧ್ಯಾಯ–3**

ಎ) ಸಂಶೋಧಕರಾಗಿ ಎಂ.ವಿ. ಶ್ರೀನಿವಾಸರು
ಬಿ) ವಿದೇಶದಲ್ಲಿ ವ್ಯಾಸಂಗ

**ಅಧ್ಯಾಯ –4**

ಎ) ಇತಿಹಾಸಕ್ಕೆ ಸಂಬಂಧಿಸಿದ ಗ್ರಂಥಗಳು
ಬಿ) ಇತಿಹಾಸಕ್ಕೆ ಸಂಬಂಧಿಸಿದ ಲೇಖನಗಳು

**ಅಧ್ಯಾಯ–5**

ಎ) ಸಾಹಿತ್ಯ ಕ್ಷೇತ್ರಕ್ಕೆ ಎಂ.ವಿ. ಶ್ರೀನಿವಾಸರವರ ಕೊಡುಗೆಗಳು
ಬಿ) ರಚಿಸಿರುವ ಕಾದಂಬರಿಗಳು
ಸಿ) ಸಂಪಾದಿತ ಕೃತಿಗಳು
ಡಿ) ಜೀವನ ಚರಿತ್ರೆ.

**ಅಧ್ಯಾಯ –6**

ಎ) ಉಪಸಂಹಾರ
ಬಿ) ಆಕರಗ್ರಂಥಗಳು
ಸಿ) ಛಾಯಾಚಿತ್ರಗಳು



# ಇತಿಹಾಸಕಾರ ಎಂ.ವಿ. ಶ್ರೀನಿವಾಸ್ ರವರ ಬದುಕು ಬರಹ

**ಪೀಠಿಕೆ:**

ಯಾವುದೇ ಕ್ಷೇತ್ರದಲ್ಲಿ ಸಾಧಕ, ಸಾರ್ಥಕ ಜೀವನ ನಡೆಸಿದ ಆದರ್ಶ ವ್ಯಕ್ತಿಗಳ ಜೀವನ ಅಧ್ಯಯನ ಮತ್ತು ಸಾಧನೆ ಇಂತಹ ವ್ಯಕ್ತಿಗಳು ನಡೆದ ದಾರಿ, ಅವರ ಮಾತು, ಅವರ ಕೃತಿ ನಾಡಿಗೆ, ಸಮಾಜಕ್ಕೆ ಸ್ಫೂರ್ತಿ ಮೂಲಗಳು ಅಭ್ಯಾಸ ಮಾಡುವುದರಿಂದ ನಮ್ಮ ಮೌಲ್ಯವು ವಿಸ್ತಾರವಾಗುತ್ತದೆ. ಅನುಭವವು ವೃದ್ಧಿಯಾಗುತ್ತದೆ. ಶೈಕ್ಷಣಿಕ ಮತ್ತು ನೈತಿಕ ಮೌಲ್ಯಗಳು, ಕುಸಿಯುತ್ತಿರುವ ಈ ಕಾಲಕ್ಕೆ ಸಚ್ಚಾರಿತ್ರಿಕವುಳ್ಳ ಒಬ್ಬ ಪ್ರತಿಭಾವಂತಹ ವಿದ್ವಾಂಸನ ಸಾರ್ಥಕ ಜೀವನ, ಮಾರ್ಗದರ್ಶಿಯೂ ವಿದ್ಯಾರ್ಥಿಗಳಿಗೆ ಹಾಗೂ ಜನ ಸಾಮಾನ್ಯರಿಗೂ ಸ್ಪೂರ್ತಿದಾಯಕವಾದವು, ಇಂತಹ ಅಧ್ಯಯನಗಳು ಇದು ಒಬ್ಬ ವ್ಯಕ್ತಿಯ ಕಥೆಯನ್ನು ಹೇಳುವುದಕ್ಕೆ ಮಾತ್ರ ಸೀಮಿತ ವಾಗಿರುವುದಿಲ್ಲ ಅದು ಒಂದು ಚಿತ್ರವನ್ನೇ ನೀಡುತ್ತದೆ. ಒಂದು ದೃಷ್ಟಿಯಲ್ಲಿ ಪ್ರಸಿದ್ದ ವ್ಯಕ್ತಿಗಳ ಜೀವನ ಕಥನವೇ ಇತಿಹಾಸವೆಂದು ಹೇಳಬಹುದು. **ಕಾರ್ಲೈಲ್** ಎಂಬ ಶ್ರೇಷ್ಠ "ಇತಿಹಾಸಕಾರನ ಚರಿತ್ರೆಯು ಅಸಂಖ್ಯಾತ ಜೀವನ ಚರಿತ್ರೆಗಳ 'ತಿರುಳು' ಎಂಬ ವ್ಯಾಖ್ಯೆಯನ್ನು ಕೊಟ್ಟಿದ್ದಾನೆ" ಅನೇಕ ವಿದ್ವಾಂಸರ ಜೀವನ ಕಥನವನ್ನು ವಿಸ್ತರಿಸಿದರೆ ಅದು ಇತಿಹಾಸವಾಗಿ ಜೀವನ ಚರಿತ್ರೆಯಾಗಿ ರೂಪುಗೊಳ್ಳುತ್ತದೆ ಎಂದು ಸಂಕ್ಷೇಪಿಸಿದ್ದಾನೆ. ಹೀಗೆ ಕಾರ್ಲೈಲ್ ಇತಿಹಾಸದಲ್ಲಿ ಮಹಾಪುರುಷನ ಅಥವಾ ನಾಯಕನ ಪಾತ್ರ ಇತಿಹಾಸದಲ್ಲೂ ಮಹತ್ವ ಪೂರಿತವಾದುದು ಮತ್ತು ಅನಿವಾರ್ಯವಾದುದು ಎಂಬೂದನ್ನು ಎತ್ತಿ ತೋರಿಸಿದ್ದಾನೆ.

ಎಂ.ವಿ. ಶ್ರೀನಿವಾಸ್‌ರವರನ್ನು ಈ ಸಂಪ್ರಬಂಧದ ಕೇಂದ್ರ ಬಿಂದುವಾಗಿ ಆರಿಸಿಕೊಳ್ಳಲು ಅನೇಕ ಕಾರಣಗಳಿವೆ. ಅವರು ಪ್ರಸಿದ್ದ ಇತಿಹಾಸಕಾರರಾಗಿದ್ದಂತೆ ಅನುಭವಿ ಲೇಖಕರು, ಚಿಂತಕರು ಆಗಿದ್ದಾರೆ. ಬೋಧಕರಾಗಿ ಸಹಸ್ರ ಸಹಸ್ರ ವಿದ್ಯಾರ್ಥಿಗಳ ಮನಸ್ಸಿಗೆ ನಾಟುವಂತೆ ವಿದ್ಯೆಯನ್ನು ಕಲಿಸಿದ್ದಾರೆ. ಹಲವಾರು ಸಂಘ ಸಂಘಟನೆಗಳ ಮೂಲಕ ಶೈಕ್ಷಣಿಕ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಸಮಾಜ ಸೇವಕರಾಗಿ ಆದರ್ಶಗುರುಗಳಾಗಿ ಅವರು ಬಹುಜನರ ಗೌರವ ಆದರಗಳಿಗೆ ಪಾತ್ರರಾಗಿದ್ದಾರೆ. ಹೀಗೆ ಹಲವು ಹತ್ತು ಸದ್ಗುಣಗಳು ವಿವಿಧ ವಿಷಯಗಳಲ್ಲಿ ಪ್ರೌಢಿಮೆ ಹೃದಯವಂತಿಕೆ ಸೇವಾಮನೋಭಾವ ಇವೆಲ್ಲವು ಒಬ್ಬ ವ್ಯಕ್ತಿಯಲ್ಲಿ ಮೇಳೈಸುವುದು ಬಹು ಅಪರೂಪ. ಈ ದೃಷ್ಟಿಯಿಂದ ನಾಡಿನ ಹಿರಿಯ ವಿದ್ವಾಂಸ ಲೇಖಕ ಎಂ.ವಿ. ಶ್ರೀನಿವಾಸರವರ ಜೀವನ ಸಾಧನೆ ಸಂದೇಶ ಇವುಗಳನ್ನೂ ಈ ಸಂಪ್ರಬಂಧದಲ್ಲಿ ಪರಿಶೀಲಿಸುವ ಉದ್ದೇಶವನ್ನು ಹೊಂದಲಾಗಿದೆ. ಈ ಸಂಪ್ರಬಂಧವನ್ನು ರಚಿಸಲು ಅವರು ಬರೆದ ಕೃತಿಗಳನ್ನು, ಅವರನ್ನು ಕುರಿತಾದ ಲೇಖನಗಳನ್ನು, ಗ್ರಂಥಗಳನ್ನು ಅಭ್ಯಾಸಮಾಡಲಾಗಿದೆ. ಅದರೊಂದಿಗೆ ಅವರ ಶಿಷ್ಯರು, ಮಿತ್ರರು ಕುಟುಂಬದ ಸದಸ್ಯರು ಇವರನ್ನು ಸಂದರ್ಶನವನ್ನು ಕೈಗೊಂಡು ಮಾಹಿತಿ ಸಂಗ್ರಹಿಸಿ ಒಂದು ಸಮಗ್ರವಾದ ವ್ಯಕ್ತಿ ಚಿತ್ರವನ್ನು ರಚಿಸಲು ಪ್ರಯತ್ತಿಸಿಲಾಗಿದೆ. ಇದು ಕೇವಲ ವೈಯಕ್ತಿಕ ಚಿತ್ರವಾಗಿರದೆ ನಮ್ಮ ಪೀಳಿಗೆಯ ಒಬ್ಬ ಪ್ರತಿಭಾನ್ವಿತ ಬುದ್ದಿಜೀವಿಯ ಸಾಧನೆಗಳನ್ನು ಯೋಜನೆಗಳನ್ನು, ವಿಮರ್ಶಿಸುವ ವಿಶ್ಲೇಷಿಸುವ, ಒಂದು ಪ್ರಯತ್ನವೂ ಆಗಿದೆ.

# ಅಧ್ಯಾಯ-1

ಎಂ.ವಿ.ಶ್ರೀನಿವಾಸ್ (ಮತ್ತಿಕೆರೆ ವೆಂಕಟಪ್ಪ ಶ್ರೀನಿವಾಸ್) ಕನ್ನಡ ನಾಡು ಕಂಡ ಒಬ್ಬ ಪ್ರತಿಭಾನ್ವಿತ ವಿದ್ವಾಂಸರು, ಬೋಧಕರು, ಲೇಖಕರು, ಹಾಗೂ ಚಿಂತಕರಾಗಿದ್ದಾರೆ. ಅವರ ಜೀವನ ಮತ್ತು ಸಾಧನೆ ಮುಂದಿನ ಪೀಳಿಗೆಯವರಿಗೆ ಹಾಗೂ ಈ ಕ್ಷೇತ್ರದಲ್ಲಿನ ಸಾಧಕರಿಗೆ ಮಾರ್ಗದರ್ಶಕವಾಗಬಲ್ಲದು. ಆಳವಾದ ಅಧ್ಯಯನ, ಸಂಶೋಧನ ಗ್ರಂಥ ರಚನೆಗಳು ಬಹಳಷ್ಟು ಕಡಿಮೆಯಾಗುತ್ತಿರುವ ಇಂದಿನ ಸಂದರ್ಭದಲ್ಲಿ ಶ್ರೀನಿವಾಸರವರು ಅದ್ವಿತೀಯ ಸಾಧಕರಾಗಿ, ಬೋಧಕರಾಗಿ, ಸಂಶೋಧಕರಾಗಿ ಎದ್ದು ನಿಲ್ಲುತ್ತಾರೆ. ಅವರ ಕೃತಿಗಳು ಸಾಹಿತ್ಯಲೋಕಕ್ಕೆ ಕರ್ನಾಟಕ ಇತಿಹಾಸಕ್ಕೆ ಅವರ ಕೊಡುಗೆ ಅದ್ವಿತೀಯ ಇವೆಲ್ಲವು ಮುಂದಿನ ಪೀಳಿಗೆಯವರಿಗೆ ಮಾರ್ಗದರ್ಶಕವಾಗಬಲ್ಲವು. ಆದುದರಿಂದ ಈ ಸಾಧಕನ ಜೀವನ ಮತ್ತು ಕೊಡುಗೆಗಳನ್ನು ತಿಳಿದು ಕೊಳ್ಳುವುದು ಅಗತ್ಯವಾಗಿದೆ. ಪ್ರತಿಕೂಲ ಪರಿಸ್ಥಿತಿಯಲ್ಲಿದ್ದು ಪ್ರತಿಯೊಂದು ಹಂತದಲ್ಲೂ ಬಹು ಕಷ್ಟಪಟ್ಟು ವ್ಯಾಸಂಗ ಮಾಡಿ ಸ್ವಸಾಮರ್ಥ್ಯದಿಂದ ಶೈಕ್ಷಣಿಕ ಕ್ಷೇತ್ರದಲ್ಲಿ ಶ್ರೇಷ್ಠಮಟ್ಟದ ಸಾಧನೆಯನ್ನು ಮಾಡಿ ಇನ್ನೂ ಸಹ ಇತರರಿಗೆ ಮಾದರಿಯಾಗುವಂತೆ ಅಧ್ಯಯನ ಸಂಶೋಧನೆಗಳಲ್ಲಿ ತೊಡಗಿಸಿಕೊಂಡಿರುವ ಈ ಮಹಾನ್ ಲೇಖಕನ ಬೋಧಕನ ಬಾಳಿನ ವಿವರಗಳನ್ನು ವಿವಿಧಕ್ಷೇತ್ರಗಳಲ್ಲಿ ಅವರ ಸಾಧನೆಯನ್ನು ಅರಿತುಕೊಳ್ಳುವುದು ಅತ್ಯಂತ ಉಪಯುಕ್ತವಾದ ಕಾರ್ಯವೆಂದು ಹೇಳಬಹುದು. ಆದುದರಿಂದ ಇವರು ಎಪ್ಪತ್ತು ವರ್ಷದ ಧೀರ್ಘಾವಧಿಯಲ್ಲಿ ಬಾಳಿದ ಜೀವನದ ಪರಿಯನ್ನು, ಬೌದ್ಧಿಕ ಕ್ಷೇತ್ರದಲ್ಲಿ ಅವರ ಸಾಧನೆಗಳನ್ನು, ಅವರ ಗ್ರಂಥಗಳನ್ನು ಕುರಿತು ಅಧ್ಯಯನ ಮಾಡಿ ಅದನ್ನು ದಾಖಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಎಂ.ವಿ. ಶ್ರೀನಿವಾಸರವರು ಜನಿಸಿದ್ದು ಬೆಂಗಳುರು ಜಿಲ್ಲೆಯ ಮತ್ತಿಕೆರೆಯಲ್ಲಿ ಅವರ ತಂದೆ ವೆಂಕಟಪ್ಪನವರು ಸಣ್ಣಮಟ್ಟದ ಗುತ್ತಿಗೆದಾರರು ನಲವತ್ತರ ದಶಕದಲ್ಲಿ ಇವರ ಕುಟುಂಬ ತುಮಕೂರು ಜಿಲ್ಲೆಯ ಹೀರೇಹಳ್ಳಿಗೆ ಹೋಗಿ ನೆಲಸಿತು. ಅಲ್ಲಿದ್ದ ಒಂದು ಸಣ್ಣ ಶಾಲೆಯಲ್ಲಿ ಅವರ ವಿದ್ಯಾಭ್ಯಾಸ ಆರಂಭವಾಯಿತು. ಹಿರೇಹಳ್ಳಿಯಲ್ಲಿ ಮಾಧ್ಯಮಿಕ ಶಾಲೆ ಇರಲಿಲ್ಲವಾದ್ದರಿಂದ ಮೂರು ಮೈಲಿ ದೂರದ ಕ್ಯಾತ್ಸಂದ್ರದಲ್ಲಿ ಓದಬೇಕಾಯಿತು. ಅನಂತರ ತುಮಕೂರಿನ ಸಿದ್ದಗಂಗಾ ಹೈಸ್ಕೂಲಿನಲ್ಲಿ ಪ್ರೌಢಶಾಲೆ ಮತ್ತು ಇಂಟರ್ ಮೀಡಿಯೇಟ್ ತರಗತಿಗಳವರೆಗು ಅಧ್ಯಯನ ಮಾಡಿ ಪ್ರತಿಯೊಂದು ಪರೀಕ್ಷೆಯಲ್ಲಿಯೂ ಉನ್ನತ ದರ್ಜೆ ಉನ್ನತ ರ್‍ಯಾಂಕುಗಳಿಸಿ ಮುಂದೆ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದಲ್ಲಿ ಬಿ.ಎ, ಆನರ್ಸ್ ಗೆ ಸೇರಿಕೊಂಡರು.

ಪ್ರಾರಂಭದಿಂದಲೂ ಇತಿಹಾಸ ವಿಷಯದಲ್ಲಿ ಆಸಕ್ತಿ ಹೊಂದಿದ್ದ ಶ್ರೀನಿವಾಸರವರಿಗೆ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗ ಮಾಡಲು ಅಪಾರ ಅವಕಾಶಗಳು ದೊರೆತವು. ಅಲ್ಲಿನ ಪ್ರಾಧ್ಯಾಪಕರ ಬೋಧನೆಯಿಂದ ಪ್ರಭಾವಿತರಾಗಿ ತಮ್ಮ ವಿಷಯವನ್ನು ಆಳವಾಗಿ ಅಧ್ಯಯನ ಮಾಡಲು ಪ್ರಾರಂಭಿಸಿದರು. ಆನರ್ಸ್ ಓದುವಾಗ ಪ್ರತಿಯೊಂದು ವರ್ಷವು ಪ್ರಥಮ ಸ್ಥಾನದಲ್ಲಿ ಬಿ.ಎ. ಆನರ್ಸ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕುನಲ್ಲಿ ಪಾಸಾಗಿದ್ದಲ್ಲದೆ, ಮೂರು ಚಿನ್ನದ ಪದಕಗಳನ್ನು ಗಳಿಸಿಕೊಂಡರು. ನಂತರ ಎಂ.ಎ ಪದವಿಯನ್ನು ಪಡೆದುಕೊಂಡು ಅದರಲ್ಲಿಯೂ ಪ್ರಥಮ ರ್‍ಯಾಂಕುಗಳಿಸಿ ಎರಡು ಚಿನ್ನದ ಪದಕಗಳನ್ನು ಪಡೆದುಕೊಂಡರು. ಮೈಸೂರು

ವಿಶ್ವವಿದ್ಯಾನಿಲಯದ ಮಹಾರಾಜ ಕಾಲೇಜಿನಲ್ಲಿ ಓದುತ್ತಿರುವಾಗಲೇ ಫ್ರೆಂಚ್, ಪರ್ಷಿಯನ್, ಜರ್ಮನ್, ಮೊದಲಾದ ಭಾಷೆಗಳಲ್ಲಿ ಅಭ್ಯಾಸ ಮಾಡಿ ಒಟ್ಟು 13 ಭಾಷೆಗಳಲ್ಲಿ ಪರಿಣಿತಿಯನ್ನು ಸಂಪಾದಿಸಿದರು. ತಮ್ಮ ಅಧ್ಯಯನ ಮುಗಿಸಿದ ನಂತರ ಶ್ರೀನಿವಾಸರವರಿಗೆ ಅಧ್ಯಾಪಕರಾಗಲೂ ಅವಕಾಶ ಸಿಕ್ಕಿತು. ಬೆಂಗಳೂರಿನ ಆರ್ಟ್ಸ್ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕರಾಗಿ ತಮ್ಮ ಸೇವೆಯನ್ನು ಆರಂಭಿಸಿದರು. ಅನಂತರ ಕಾಲೇಜು ಶಿಕ್ಷಣ ಮಂಡಳಿಯ ವ್ಯಾಪ್ತಿಯಲ್ಲಿ ರಾಜ್ಯದ ಹಲವಾರು ಕಾಲೇಜುಗಳಲ್ಲಿ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ. ಪ್ರಾಂಶುಪಾಲರಾಗಿ ಉತ್ತಮ ಸೇವೆಯನ್ನು ಸಲ್ಲಿಸಿ ಒಳ್ಳೆಯ ಹೆಸರನ್ನುಗಳಿಸಿದರು. ಬೋಧನೆಯೊಂದಿಗೆ, ಸಂಶೋಧನೆಯು ಮುಂದುವರಿಯಿತು ಈ ಅವಧಿಯಲ್ಲಿ ಅವರು ಅನೇಕ ಗ್ರಂಥಗಳನ್ನು ರಚಿಸಿದರು. ಅವುಗಳಲ್ಲಿ ಬಹಳ ಮುಖ್ಯವಾದವು. ರತ್ನಾಕರ ಮತ್ತು ಮಸ್ತಾನಿ ಎಂಬ ಐತಿಹಾಸಿಕ ಕಾದಂಬರಿಗಳು 16ನೇ ಶತಮಾನದ ಪ್ರಸಿದ್ಧ ಜೈನ ಕವಿ ದಾರ್ಶನಿಕ ರತ್ನಾಕರನ, ಜೀವನವನ್ನು ಕುರಿತ ಅವರ ಐತಿಹಾಸಿಕ ಕಾದಂಬರಿ ಜಿ. ಬ್ರಹ್ಮಪ್ಪ ಅವರೊಂದಿಗೆ ಸೇರಿ ಬರೆದಿದ್ದು, ವಿಮರ್ಶಕರ ಮೆಚ್ಚುಗೆಗೆ ಪಾತ್ರವಾದುದಲ್ಲದೆ ಮೈಸೂರು ಸರ್ಕಾರದ ಪ್ರಶಸ್ತಿಯನ್ನು ಗಳಿಸಿಕೊಂಡರು. ಅನಂತರ ಅದು ಮೂರು ಭಾಷೆಗಳಿಗೆ ಭಾಷಾಂತರವಾಯಿತು. ಮರಾಠ ಇತಿಹಾಸದ ಒಂದು ರೋಮಾಂಚಕಕಾರಿ ಪ್ರಸಂಗ. ಪೇಶ್ವೆ ಬಾಜಿರಾವ್ ಮತ್ತು ಮಸ್ತಾನಿಯವರ ರೋಚಕ ಕಥೆ ಇದನ್ನು ರಚಿಸಲು ಅವರು 6 ತಿಂಗಳು ಕ್ಷೇತ್ರ ಕಾರ್ಯ ಹಾಗೂ ಮೂಲ ಮರಾಠಿ ದಾಖಲೆಗಳನ್ನು ಅಭ್ಯಾಸ ಮಾಡಿ ಈ ಪುಸ್ತಕವನ್ನು ಹೊರ ತಂದರು. ಮಸ್ತಾನಿ ಗ್ರಂಥವನ್ನು ಸಾಹಿತ್ಯಸಕ್ತರು, ವಿಮರ್ಶಕರು ಮೆಚ್ಚಿ ಪ್ರಶಂಸೆ ಮಾಡಿದರು. ಇದೆ ಸಮಯದಲ್ಲಿ ಅವರು ಕರ್ನಾಟಕದ ಅನೇಕ ರಾಜಮನೆತನಗಳನ್ನು ಕುರಿತು ಅಭ್ಯಾಸ ಮಾಡಿ ಗ್ರಂಥಗಳನ್ನು ರಚಿಸಿದರು.

ಎಂ.ವಿ. ಶ್ರೀನಿವಾಸರವರು 1967 ರಲ್ಲಿ ದೆಹಲಿಯ ಪ್ರತಿಷ್ಠಿತ ಜವಹರ್ ಲಾಲ್ ನೆಹರು ವಿಶ್ವವಿದ್ಯಾನಿಲಯದಲ್ಲಿ ಸಂಶೋಧನೆಯನ್ನು ಪ್ರಾರಂಭಿಸಿದರು. ಅಲ್ಲಿ ವಿವಿಧ ವಿಷಯಗಳಲ್ಲಿ ಅಧ್ಯಯನ ಮಾಡಿ ಅಮೇರಿಕದ ಪ್ರಸಿದ್ಧ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಸಂಶೋಧನೆಯನ್ನು ಕೈಗೊಂಡರು. ಭಾರತ ಅಮೇರಿಕ ಸಂಬಂಧದ ಮೇಲೆ ಆಳವಾಗಿ ಅಭ್ಯಾಸ ಮಾಡಿ ಪಿ.ಎಚ್.ಡಿ ಪದವಿಯನ್ನು ಗಳಿಸಿಕೊಂಡು ಮತ್ತೆ ಬೋಧನ ಕ್ಷೇತ್ರಕ್ಕೆ ಹಿಂದುರಿಗಿದರು. 1972 ರಲ್ಲಿ ಅವರು ಚಿತ್ರದುರ್ಗದ ಪದವಿ ಕಾಲೇಜಿನಲ್ಲಿ ಉಪ ಪ್ರಾಧ್ಯಾಪಕರಾಗಿ ಬೋಧನೆಯನ್ನು ಆರಂಭಿಸಿದರು. ಚಿತ್ರದುರ್ಗದ ಇತಿಹಾಸ ಮತ್ತು ಇತಿಹಾಸ ಕಾರರನ್ನು ಕುರಿತು ಅನೇಕ ಗ್ರಂಥಗಳನ್ನು ರಚಿಸಿದರು. ಈ ಸಂದರ್ಭದಲ್ಲಿ ಲಕ್ಷ್ಮಣ ತೆಲಗಾವಿ ಯವರ ಜೊತೆ ಸೇರಿ ಹೊರತಂದ ಚಂದ್ರವಳ್ಳಿ ಎಂಬ ಗ್ರಂಥ ಸ್ಥಳೀಯ ಇತಿಹಾಸದ ಅಧ್ಯಯನ ಹೇಗಿರಬೇಕು ಎನ್ನುವುದಕ್ಕೆ ಮಾದರಿಯಾಗಿದೆ ಎಂದು ಪತ್ರಿಕಾ ವಿಮರ್ಶೆಗಳು ಪ್ರಶಂಸೆ ಮಾಡಿದವು. ಪ್ರಸಿದ್ದ ಇತಿಹಾಸಕಾರ ಹುಲ್ಲೂರು ಶ್ರೀನಿವಾಸ ಜೋಯಿಸರ ಅಪ್ರಕಟಿತ ಲೇಖನಗಳನ್ನು, ಪುಸ್ತಕಗಳನ್ನು ಹೊರತಂದಿದ್ದು ಶ್ರೀನಿವಾಸರವರ ಬಹು ದೊಡ್ಡ ಸಾಧನೆ.

1980ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ವಿಭಾಗದಲ್ಲಿ ರೀಡರ್ ಆಗಿ ಅನಂತರ ಪ್ರಾಧ್ಯಾಪಕರಾಗಿ ಇತಿಹಾಸ ವಿಭಾಗದ ಮುಖ್ಯಸ್ಥರಾಗಿ ಎಂ.ವಿ. ಎಸ್ ರವರು ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಅವರು ಸೆನೆಟ್ ಸದಸ್ಯರು, ಶೈಕ್ಷಣಿಕ ಮಂಡಳಿಯ ಸದಸ್ಯರು

ಕಲಾನಿಕಾಯದ ಡೀನ್ ಆಗಿದ್ದರು. ವಿಶ್ವವಿದ್ಯಾನಿಲಯದಲ್ಲಿ ವಿಶೇಷ ಸಂಶೋಧನಾ ವಿಭಾಗದಲ್ಲಿ ಕೆಲವು ಯೋಜನೆಗಳನ್ನು ಹಾಕಿಕೊಂಡು ಕ್ಷೇತ್ರ ಕಾರ್ಯವನ್ನು ಮಾಡಿದರು. ಬೆಂಗಳೂರು, ಮದ್ರಾಸ್, ಮತ್ತು ದೆಹಲಿಯ ಪತ್ರಾಗಾರದಲ್ಲಿದ್ದ ದಾಖಲೆಗಳನ್ನು ಅಭ್ಯಾಸ ಮಾಡಿ ಲೇಖನಗಳನ್ನು, ವರದಿಗಳನ್ನು ತಯಾರಿಸಿದರು.

ಉತ್ತಮ ಬೋಧಕರಾಗಿದ್ದಂತೆ ಅವರು ಸಂಶೋಧಕರೂ ಆಗಿದ್ದರು. ವಿದ್ಯಾರ್ಥಿಗಳಿಗೆ ಅವರು ಬೋಧಪ್ರದವಾದ ಪಾಠಗಳನ್ನು ಮಾಡುತ್ತಿದ್ದಂತೆ ಉನ್ನತ ವ್ಯಾಸಂಗವನ್ನು ಮಾಡಲು ಪ್ರೇರೇಪಣೆ ಮಾಡುತ್ತಿದ್ದರು. ಶ್ರೀನಿವಾಸರವರ ಶೈಕ್ಷಣಿಕ ಕಾರ್ಯ ಕಾಲೇಜು ಮತ್ತು ನಾಲ್ಕು ಕೊಠಡಿಗಳ ನಡುವಿನ ಬೋಧನ ಕಾರ್ಯಕ್ಕೆ ಸೀಮಿತವಾಗಿರಲಿಲ್ಲ. ಕರ್ನಾಟಕದ ಹಾಗೂ ಭಾರತದಲ್ಲಿ ನಡೆಯುತ್ತಿದ್ದ ಹಲವಾರು ವಿಚಾರ ಸಂಕೀರ್ಣ. ಸಮ್ಮೇಳನ ಗೋಷ್ಠಿ ಭಾಷಣ ಕಾರ್ಯಕ್ರಮಗಳಲ್ಲಿ ಅವರು ತಪ್ಪದೆ ಭಾಗವಹಿಸಿ ಪ್ರಬಂಧಗಳನ್ನು ಮಂಡಿಸುತ್ತಿದ್ದರು.

ಈ ವೇಳೆಗೆ ಅವರು ತಮ್ಮ ವಿದ್ವತ್ ಪೂರ್ಣವಾದ ಬರವಣಿಗೆಗಳಿಂದ ಹಾಗೂ ಪ್ರಬಂಧ ಮಂಡನೆಗಳಿಂದ ದಕ್ಷಿಣ ಭಾರತದ ಇತಿಹಾಸ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆದುಕೊಂಡಿದ್ದರು. ಈ ರೀತಿಯಲ್ಲಿ ತರಗತಿಯ ಒಳಗೂ ಹೊರಗೂ ತಮ್ಮ ಬೋಧನೆಯಿಂದ ಸಂಶೋಧನೆಯಿಂದ ಶ್ರೇಷ್ಠ ವಿದ್ವಾಂಸರೆಂದು ಅವರು ಗುರುತಿಸಲ್ಪಟ್ಟರು. ನಿವೃತ್ತಿಯ ನಂತರ ಪ್ರೊ.ಶ್ರೀನಿವಾಸ್ ರವರು ಯೋಗಿ ನಾರಾಯಣ ಇಂಡಾಲಜಿ ಕೇಂದ್ರದ ನಿರ್ದೇಶಕರಾಗಿ ಐದು ವರ್ಷಗಳ ಕಾಲ ಸೇವೆ ಸಲ್ಲಿಸಿದರು. ಅನಂತರ ಹಂಪಿ ಕನ್ನಡ ವಿಶ್ವವಿದ್ಯಾಲಯ ಮತ್ತು ತುಮಕೂರು ವಿಶ್ವವಿದ್ಯಾನಿಲಯಗಳಲ್ಲಿ ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ.

ಎಂ.ವಿ. ಶ್ರೀನಿವಾಸ್ ರವರು ಅನೇಕ ವಿಧವಾದ ಸಾರ್ವಜನಿಕ ಸೇವಾ ಸಂಸ್ಥೆಗಳಲ್ಲೂ ತಮನ್ನು ತೊಡಗಿಸಿಕೊಂಡು ಸೇವೆ ಸಲ್ಲಿಸಿದ್ದಾರೆ. 1966 ರಲ್ಲಿ ಅವರು ನಿವೃತ್ತಿಯಾದ ನಂತರ ಹಿಂದಿಗಿಂತಲೂ ಹೆಚ್ಚಾಗಿ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ.

ವರ್ಷದುದ್ದಕ್ಕೂ ಅವರು ಒಂದಲ್ಲ ಒಂದು ವಿಚಾರ ಸಂಕೀರ್ಣ ಗೋಷ್ಠಿ ಸಭೆ ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದರು. ಅವರ ಸೇವಾ ಕ್ಷೇತ್ರ ಬಹಳ ವಿಶಾಲವಾದುದು. ಅವರ ವಿದ್ಯಾರ್ಥಿಗಳು ಇಂದಿಗೂ ಅವರನ್ನು ಸಂಪರ್ಕಿಸಿ ಸಲಹೆ ಮಾರ್ಗದರ್ಶನಗಳನ್ನು ಪಡೆಯುತ್ತಿದ್ದಾರೆ. ಪ್ರೊ.ಎಂ.ವಿ. ಶ್ರನಿವಾಸರವರು 12 ಜನರಿಗೆ ಪಿ.ಎಚ್.ಡಿ ಪದವಿಗೆ ಮಾರ್ಗದರ್ಶಕರಾಗಿದ್ದರು. ಸದಾ ಇತಿಹಾಸಕ್ಕೆ ಸಂಬಂಧಿಸಿದ ಅಧ್ಯಯನ, ಸಂಶೋಧನೆಯಲ್ಲಿ ಅವರು ಪ್ರಮುಖ ಪಾತ್ರವಹಿಸುತ್ತಿದ್ದಾರೆ.

ಎಂ.ವಿ. ಶ್ರೀನಿವಾಸ್‌ರವರು ಹಲವಾರು ಶೈಕ್ಷಣಿಕ, ಬೌದ್ಧಿಕ ಸಂಸ್ಥೆಗಳನ್ನು ಸ್ಥಾಪಿಸಿ ಅವುಗಳ ಮೂಲಕ ಇತಿಹಾಸದ ಸಂದೇಶವನ್ನು ಬಹು ಪರಿಣಾಮಕಾರಿಯಾಗಿ ಹರಡುತ್ತಾ ಬಂದಿದ್ದಾರೆ.

ತುಮಕೂರಿನ ಇತಿಹಾಸ ಪರಿಷತ್ತು, ಚಿತ್ರದುರ್ಗದ ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ ಮತ್ತು ಚಿಂತನಾ ಯೋಗಿನಾರಾಯಣ ಇಂಡಾಲಜಿ ಕೇಂದ್ರ, ಕರ್ನಾಟಕ ಲೇಖಕರ ಸಂಘ

ಮುಂತಾದ ಸಂಸ್ಥೆಗಳಲ್ಲಿ ಅವರು ಸಂಸ್ಥಾಪಕರಾಗಿ, ಅಧ್ಯಕ್ಷರಾಗಿ, ಪ್ರಮುಖ ಪಾತ್ರ ವಹಿಸುತ್ತಾ ಬಂದಿದ್ದಾರೆ.

ಸಾಹಿತ್ಯ ಕ್ಷೇತ್ರಕ್ಕೂ ಶ್ರೀನಿವಾಸರವರ ಸೇವೆ ಗಮನಾರ್ಹವಾದುದು ಅವರು ತಮ್ಮ ಕವನ, ಕಥೆ ಕಾದಂಬರಿ, ವಿಮರ್ಶೆ ಬರವಣಿಗೆಗಳಿಂದ ಕನ್ನಡ ಸಾಹಿತ್ಯಕ್ಕೆ ಗಣನೀಯವಾದ ಕೊಡುಗೆಯನ್ನು ನೀಡಿದ್ದಾರೆ.

ಶ್ರೀನಿವಾಸ್‌ರವರ ಸೇವೆಯನ್ನು ಗುರುತಿಸಿ ಅನೇಕ ಸಂಸ್ಥೆಗಳು ಸಂಘಟನೆಗಳು ಅವರನ್ನು ಸನ್ಮಾನಿಸಿವೆ. ಅಖಿಲ ಭಾರತೀಯ ಸಾಹಿತ್ಯ ಆಕಾಡೆಮಿ ಲೇಖಕರ ಪಟ್ಟಿಯಲ್ಲಿಯೂ ಏಷ್ಯಾದ ಪ್ರಸಿದ್ಧ ಲೇಖಕರ ಪಟ್ಟಿಯಲ್ಲಿಯೂ ಅವರ ಕೃತಿಗಳ ಮತ್ತು ಕೊಡುಗೆಯನ್ನು ಕುರಿತ ಪ್ರಸ್ತಾಪವನ್ನು ಕಾಣಬಹುದಾಗಿದೆ.

**ಅಧ್ಯಯನ ವಸ್ತುವಿನ ಮಹತ್ವ:**

ಪ್ರೊ.ಎಂವಿ.ಶ್ರೀನಿವಾಸ್ ರವರ ಬದುಕಿನ ಹೋರಾಟ ವಿವಿಧ ಕ್ಷೇತ್ರಗಳಲ್ಲಿ ಅವರ ಸಾಧನೆ ಇತಿಹಾಸ ಕ್ಷೇತ್ರಕ್ಕೆ ಅವರ ಕೊಡುಗೆಗಳು ಗಮನಾರ್ಹವಾಗಿವೆ. ವಿದ್ವಾಂಸರ, ಓದುಗರ, ಸಂಶೋಧಕರ, ಪಂಡಿತರ ಪ್ರಶಂಸೆಗೆ ಒಳಗಾಗಿದ್ದರು. ಅವರ ಹೋರಾಟದ ಬದುಕನ್ನು ಅವರ ಬೌದ್ಧಿಕ ಕ್ಷೇತ್ರದ ಸಾಧನೆಯನ್ನು ವಿವಿಧ ಕ್ಷೇತ್ರಗಳಿಗೆ ಅವರ ಕಾಣಿಕೆಯನ್ನು ದಾಖಲಿಸುವುದು ಅತ್ಯಗತ್ಯ ಎಂದು ಭಾವಿಸಬಹುದು.

ಪ್ರೊ.ಎಂ.ವಿ. ಶ್ರೀನಿವಾಸ್ ರವರನ್ನು ವಿದ್ವತ್ ಲೋಕ ಗುರುತಿಸಿ ಗೌರವಿಸುವುದು ಅವರೊಬ್ಬ ಶ್ರೇಷ್ಠ ಬೋಧಕ, ಲೇಖಕ, ಸಂಶೋಧಕ ಸಂಘಟಕರೆಂದು ಅವರ ಸಂಶೋಧನೆಯ ಹರಿವು ಬಹಳ ವಿಸ್ತಾರವಾದುದು, ಅವರ ಪುಸ್ತಕಗಳ ಸಂಖ್ಯೆಗಿಂತ ವಿಷಯ ವೈವಿಧ್ಯ ಅವುಗಳ ಗುಣಮಟ್ಟ ಮುಖ್ಯವಾದುದು. ಅವರ ಪುಸ್ತಕಗಳನ್ನು ಇಲ್ಲಿ ರಾಜಕೀಯ ಇತಿಹಾಸ, ಸಾಂಸ್ಕೃತಿಕ, ಇತಿಹಾಸ ಲೇಖನ ಸಂಗ್ರಹ ಸಂಪಾದನೆ ಸೃಜನ ಶೀಲ ಸಾಹಿತ್ಯ ಕೃತಿಗಳು ಮೊದಲಾದವು ಸೇರಿವೆ.

ಮೊದಲನೆಯದಾಗಿ ಅವರು ಸಂಪಾದಕರಾಗಿ ಹೊರತಂದ ಪತ್ರಿಕೆಗಳು ವಾರ್ಷಿಕ ಸಂಚಿಕೆಗಳು ಮೌಲ್ಯಯುತವಾಗಿ ಅವರು ಮೂರು ಕಾಲೇಜುಗಳಲ್ಲಿ, ಮೈಸೂರು, ಚಿಕ್ಕಮಗಳೂರು, ಮತ್ತು ಸಿಂಧನೂರುಗಳಲ್ಲಿ ಹೊರ ತಂದ ವಾರ್ಷಿಕ ಸಂಚಿಕೆಗಳು ಮುಖ್ಯವಾದವು. ಎಂ.ವಿ. ಶ್ರೀನಿವಾಸ್ ಇತಿಹಾಸ ಚಂದ್ರಿಕೆ ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿ ಅದನ್ನು ಆರು ವರ್ಷಗಳ ಕಾಲ ಉನ್ನತ ಮಟ್ಟದಲ್ಲಿ ನಡೆಸಿಕೊಂಡು ಬಂದರು. ಕರ್ನಾಟಕ ಇತಿಹಾಸ ಕಾಂಗ್ರೆಸ್ ಅಧಿವೇಶನದಲ್ಲಿ ಅಧ್ಯಕ್ಷರಾಗಿದ್ದ ಡಾ॥ ಜಿ.ಎಸ್. ದೀಕ್ಷಿತ್‌ರು ಡಾ: ಶ್ರೀನಿವಾಸ್ ರವರು ಈ ಪತ್ರಿಕೆಯ ಮೂಲಕ ಇತಿಹಾಸಕ್ಕೆ ಒಳ್ಳೆಯ ಕೊಡುಗೆ ನೀಡಿದ್ದಾರೆಂದು ಶ್ಲಾಘೀಸಿದರು. ಮಧ್ಯಕಾಲೀನ ಸಂಸ್ಥಾನಗಳನ್ನು ಕುರಿತು ಡಾ: ಎಂ.ವಿ ಶ್ರೀನಿವಾಸರವರು ಮೂಲ ದಾಖಲೆಗಳನ್ನು ಅಭ್ಯಾಸ ಮಾಡಿ ಕೆಲವು ಗ್ರಂಥಗಳನ್ನು ರಚಿಸಿದ್ದಾರೆ. ಮಹಾರಾಷ್ಟ್ರದ ಪ್ರಸಿದ್ಧ ಪೇಶ್ವೆ ಬಾಜೀರಾಯನನ್ನು ಕುರಿತು ಒಂದು ಗ್ರಂಥವನ್ನು ಎಪ್ಪತ್ತರ ದಶಕದಲ್ಲಿ ಪ್ರಕಟಿಸಿದ್ದಾರೆ. ಈ ಭಾರತದ ಸಲೋಮೆ ಎಂದು

ಪ್ರಸಿದ್ದವಾಗಿದ್ದ ಮೂಲ ಮರಾಠಿ ಧಪ್ತರ್ ಮತ್ತಿತರ ದಾಖಲೆಗಳನ್ನು ಅಧ್ಯಯನ ಮಾಡಿ ಮೇಲಿನ ಪುಸ್ತಕಗಳನ್ನು ರಚಿಸಿದರು.

ನಾಡಿನ ಪ್ರಸಿದ್ದ ಇತಿಹಾಸತಜ್ಞ ಡಾ॥ ಶ್ರೀಕಂಠಶಾಸ್ತ್ರೀಯವರು ರಚಿಸಿದ್ದ ಜಿಯೋಪಾಲಿಟಿಕ್ಸ್ ಆಫ್ ಇಂಡಿಯಾ ಎನ್ನುವ ಪ್ರೌಢ ಗ್ರಂಥವನ್ನು ಸಂಪಾದಿಸಿ ಅದಕ್ಕೆ ಒಂದು ಪ್ರೌಢ ಮುನ್ನುಡಿಯನ್ನು ಬರೆದಿದ್ದಾರೆ. ಜಿಯೋಪಾಲಿಟಿಕ್ಸ್ ವಿಷಯದ ಬಗ್ಗೆ ಆಳವಾದ ಅಧ್ಯಯನ ನಡೆಸಿರುವ ಪ್ರೊ.ಶ್ರೀನಿವಾಸ ರವರು ಆ ವಿಷಯದ ಬಗ್ಗೆ ಕೆಲವು ಲೇಖನಗಳನ್ನು ಬರೆದಿದ್ದಾರೆ. ಕೊಡಗು ಇತಿಹಾಸದ ಬಗ್ಗೆ ಹಲವಾರು ಪತ್ರಾಗಾರಗಳಲ್ಲಿನ ದಾಖಲೆಗಳನ್ನು ಪರಿಶೀಲಿಸಿ ಕೊಡಗು ಅಗ್ರೇರಿಯನ್ ಸಿಸ್ಟಮ್ ಎಂಬ ಸಂಶೋಧನ ಸಂಕಲನವನ್ನು ತಯಾರಿಸಿದ್ದಾರೆ. ಕೊಡಗಿನ ಇತಿಹಾಸ ಮತ್ತು ಸಂಸ್ಕೃತಿಯನ್ನು ಕುರಿತು ಅವರು ವಿವಿಧ ಗೋಷ್ಠಿಗಳಲ್ಲಿ ಮಂಡಿಸಿದ ಪ್ರಬಂಧಗಳು ಗ್ರಂಥ ರೂಪದಲ್ಲಿ ಪ್ರಕಟವಾಗಿವೆ.

ಸದಾ ಅಧ್ಯಯನ ಅಧ್ಯಾಪನ ಸಂಶೋಧನೆಯಲ್ಲಿ ನಿರಂತರ ವಾಗಿದ್ದೂಕೊಂಡಿರುವ ಪ್ರೊ.ಶ್ರೀನಿವಾಸ್ ರವರು ತಮ್ಮ ಜೀವನದುದ್ದಕ್ಕೂ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ತಮ್ಮ ಊರಾದ ಹಿರೇಹಳ್ಳಿಯ ಗ್ರಾಮ ಸೇವಾ ಸಂಘ ವಿದ್ಯಾರ್ಥಿಯಾಗಿದ್ದಾಗ ಸಮಾಜ ಸೇವಾ ಸಂಘಗಳ ಚಟುವಟಿಕೆ, ಸ್ಕೌಟ್ ಸಂಸ್ಥೆಯಲ್ಲಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತ ಬಂದರು.

ಮೈಸೂರು ಫ್ಯಾಮಿಲಿ ಪ್ಲಾನಿಂಗ್ ಸಂಸ್ಥೆಯ ಸದಸ್ಯರಾಗಿ 20 ವರ್ಷಗಳ ಕಾಲ ಸೇವೆ ಸಲ್ಲಿಸಿದ್ದಾರೆ, ಹದಿಹರೆಯದವರ ಮಾರ್ಗದರ್ಶನ ಕಾರ್ಯವನ್ನು ಬಹು ತೃಪ್ತಿಕರವಾಗಿ ನೆರವೇರಿಸಿದರು. ಮೈಸೂರಿನಲ್ಲಿ ಪ್ರಕೃತಿ ಚಿಕಿತ್ಸಾ ಶಿಬಿರ, ಧ್ಯಾನ ಶಿಬಿರ, ಯೋಗಗಳನ್ನು ಏರ್ಪಡಿಸಿ ನಾಗರಿಕರಿಗೆ ಉತ್ತಮ ಸೇವೆ ಸಲ್ಲಿಸಿದರು. ಅನಪಮವಾದ ಪಾಂಡಿತ್ಯ ಪ್ರತಿಭೆ ಸೃಜನ ಶೀಲತೆಯೊಂದಿಗೆ ಸದ್ಗುಣಗಳನ್ನು ರೂಢಿಸಿಕೊಂಡು ಎಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ. ನಿರ್ಮಲ ನಿರಹಂಕಾರದ ನಡತೆ ನಿಸ್ವಾರ್ಥ ಸೇವಾ ಮನೋಭಾವದ ನಡೆನುಡಿ. ಅನ್ಯಾಯದ ವಿರುದ್ದ ಹೋರಾಡುವ ಛಲ ಅವರಲ್ಲಿ ಎದ್ದು ಕಾಣುವ ಸದ್ಗುಣಗಳು ಬಾಳಿನುದ್ದಕ್ಕೂ ತಮ್ಮೆಲ್ಲಾ ನೋವನ್ನು ನುಂಗಿಕೊಂಡು ಇತರರಿಗೆ ಸುಖ ಸಂತಸವನ್ನು ನೀಡುತ್ತಾ ಬಂದಿರುವ ಪ್ರೊ॥ ಶ್ರೀನಿವಾಸ್ ಅವರನ್ನು ಎಲ್ಲರೂ ಪೂಜ್ಯ ಭಾವನೆಯಿಂದ ನೋಡುತ್ತಾ ಬಂದಿದ್ದಾರೆ. ವಿದ್ಯಾರ್ಥಿಯಾಗಿ, ಸಂಶೋಧಕರಾಗಿ, ವಿದ್ವಾಂಸರಾಗಿ ತಾವು ಪಡೆದುಕೊಂಡ ವಿದ್ಯೆ ಪಾಂಡಿತ್ಯವನ್ನು ನಿರ್ವಂಚನೆಯಿಂದ ವಿದ್ಯಾರ್ಥಿಗಳಿಗೆ ಅದನ್ನು ಕೇಳಿದವರಿಗೆ ನೀಡುತ್ತಾ ಬಂದಿರುವ ಶ್ರೀನಿವಾಸ್ ಸಹಸ್ರ ಸುಸಜ್ಜಿತ ಗ್ರಂಥಾಲಯಗಳಿಂದ ದಾಖಲೆಗಳನ್ನು ಮಾಹಿತಿಯನ್ನು ಪಡೆದು ಜೇನು ಹುಳು ಮಧುವನ್ನು ಸಂಗ್ರಹಿಸುವಂತೆ ಬೆಟ್ಟಗುಡ್ಡ, ಕಾಡು ಕೋಟೆ, ಪಾಳು ದೇಗುಲ, ಸ್ಮಾರಕಗಳನ್ನು ಸುತ್ತಿ ಕ್ಷೇತ್ರ ಕಾರ್ಯ ನಡೆಸಿ ವಿಷಯ ಸಂಗ್ರಹಿಸಿ ತಮ್ಮ ವಿದ್ಯಾರ್ಥಿಗಳಿಗೆ ಬೋಧನೆಯ ಮೂಲಕ ಓದುಗರಿಗೆ ಗ್ರಂಥಗಳ ಮೂಲಕ ಅರಿವು ನೀಡುತ್ತಾ ಬಂದಿದ್ದಾರೆ.

ಪ್ರೊ. ಶ್ರೀನಿವಾಸ್, ಅವರ ಓದಿನ ಹರವು ಸಂಶೋಧನೆಯ ವಿಸ್ತಾರ ಬಹುದೊಡ್ಡದು. ಅಮೇರಿಕ ಇತಿಹಾಸ, ಭಾರತ ಅಮೇರಿಕ ರಾಜಕೀಯ ಸಂಬಂಧದ ಬಗ್ಗೆ ಪಿ.ಎಚ್.ಡಿ. ಗಾಗಿ ಸಂಶೋಧನೆ ನಡೆಸಿ ಮಹಾ ಪ್ರಬಂಧವನ್ನು ಹಾಗೂ 26 ಸಂಶೋಧನಾ ಪ್ರಬಂಧಗಳನ್ನು ರಚಿಸಿದರು. ಅನಂತರ ಮರಾಠ ಇತಿಹಾಸ, ಕರ್ನಾಟಕದ ಹಲವು ಅರಸು ಮನೆತನಗಳ ಬಗ್ಗೆ ಅಧ್ಯಯನ ಮಾಡಿ ನಾಲ್ಕು ಪುಸ್ತಕ ಬರೆದಿದ್ದಾರೆ. ಕರ್ನಾಟಕದ ಪಾಳೆಯಗಾರರ ಅಧ್ಯಯನ ಅವರ ಪ್ರಿಯವಾದ ಕ್ಷೇತ್ರ. ಕೊಡಗಿನ ಇತಿಹಾಸ, ಚಿತ್ರದುರ್ಗ, ಕೆಳದಿ ನಾಯಕರು, ಕೆಂಪೇಗೌಡ ಅವರ ಇತಿಹಾಸವನ್ನು ಧೀರ್ಘಕಾಲ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೋಧಿಸಿ ಅನೇಕ ಸಂಶೋಧನಾ ಪ್ರಬಂಧಗಳನ್ನು ಬರೆದಿದ್ದಾರೆ. ವಿಚಾರಗೋಷ್ಠಿಗಳಲ್ಲಿ ಪ್ರಬಂಧವನ್ನು ಮಂಡಿಸುತ್ತಾ ಬಂದಿದ್ದಾರೆ. ಹಲವಾರು ಗೋಷ್ಠಿ, ಸಮ್ಮೇಳನಗಳಲ್ಲಿ ಅಧ್ಯಕ್ಷತೆ ವಹಿಸಿ, ಸಂಚಾಲಕರಾಗಿ, ಆಶಯ ಭಾಷಣ ಮಂಡಿಸಿ ಹಾಗೂ ಪ್ರಮುಖ ಪಾತ್ರವಹಿಸಿ ಉಪಯುಕ್ತಕರವಾದ ಸಲಹೆ ನೀಡಿ ಸಮ್ಮೇಳನಗಳನ್ನು ವ್ಯವಸ್ಥೆಗೊಳಿಸಿದ್ದಾರೆ.

ಬಾಳಿನುದ್ದಕ್ಕೂ ಅಂತಸ್ತು, ಆದಾಯ, ಅವಕಾಶಗಳನ್ನು ಬಯಸದೆ ಪದವಿ ಪ್ರಶಸ್ತಿಗಳಿಗೆ ಆಸೆ ಪಡದೆ ಇತಿಹಾಸ ಲೋಕದಲ್ಲಿ ಹುದುಗಿರುವ ಸತ್ಯಸಂಗತಿಯನ್ನು ಹೊರತೆಗೆದು ಎಲ್ಲರಿಗೂ ನೀಡಿ ತಮ್ಮ ಸಮರ್ಪಣ ಭಾವದಿಂದ ಸರ್ವರ ಆದರಕ್ಕೆ ಪಾತ್ರರಾಗಿದ್ದಾರೆ. ಹಾಗೇಯೇ ತಮ್ಮ ಸಂಶೋಧನೆಯ ಸೇವೆಯನ್ನು ಹೊಸ ಹೊಸ ಕ್ಷೇತ್ರಗಳಿಗೆ ಹೊಸ ಎತ್ತರಗಳಿಗೆ ಕೊಂಡೊಯ್ದಿದ್ದಾರೆ. ಶ್ರೀಯುತರು ಇತಿಹಾಸ, ಸಾಹಿತ್ಯ ಎರಡು ಕ್ಷೇತ್ರಗಳಲ್ಲಿಯೂ ತಮ್ಮ ಅಭೂತ ಪೂರ್ವ ಸಾಧನೆಯನ್ನು ಗಳಿಸಿದ್ದಾರೆ. ಬರಹಗಾರರಾಗಿ, ಸಂಶೋಧಕರಾಗಿ, ಬೋಧಕರಾಗಿ ವಿದ್ಯಾರ್ಥಿಗಳಿಗೆ ಸಂಶೋಧಕರಿಗೆ ಹೊಸ ಹೊಸ ವಿಚಾರಗಳನ್ನು ತಿಳಿದುಕೊಳ್ಳಬೇಕೆಂಬ ಅದಮ್ಯ ಕುತೂಹಲ ಇರುವವರಿಗೆ ಇವರ ಕಾಣಿಕೆ ಮಹತ್ವ ಪೂರ್ಣವಾದುದು.

**ಅಧ್ಯಯನ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳ ಸಮೀಕ್ಷೆ**

**ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಶ್ರೀಯುತರ ಕೃತಿಗಳು ಈ ಕೆಳಗಿನಂತಿವೆ.**

| | | |
|---|---|---|
| 1 | ಜ್ಯೋತಿ | 1956–57 |
| 2 | ಮಧುಕರ | 1960 |
| 3 | ರತ್ನಾಕರ | 1961 |
| 4 | ಮಸ್ತಾನಿ | 1962 |
| 5 | ಸಮರಸ | 1964 |
| 6 | ಇಂದಿನ ಅಮೇರಿಕಾ | 1966 |
| 7 | ಪ್ರಪಂಚ ಚರಿತ್ರೆ | 1970 |
| 8 | ಸವದತ್ತಿಯ ರಟ್ಟರು | 1972 |
| 9 | ಚಂದ್ರವಳ್ಳಿ | 1974 |
| 10 | ಐತಿಹಾಸಿಕ ಲೇಖನಗಳು | 1975 |
| 11 | ಸಿರುಮನೃಪಾಲ | 1976 |

| | | |
|---|---|---|
| 12 | ರಣಜಿತ್ ಸಿಂಗ್ | 1977 |
| 13 | ಪೇಶ್ವೆ ಬಾಜಿರಾವ್ | 1978 |
| 14 | ಚಿನ್ಮಯ | 1979 |
| 15 | ಇದು ಎಂಥ ಜೀವನವಯ್ಯ | 1979 |
| 16 | ಕರ್ನಾಟಕ ಇತಿಹಾಸ | 1982 |
| 17 | ರಾಷ್ಟ್ರಕೂಟರು | 1983 |
| 18 | Geo Politics of India | 1988 |
| 19 | ಪ್ರಜ್ವಲಿಸುವ ಪಂಜು | 1992 |
| 20 | ತುಮಕೂರು ಜಿಲ್ಲಾ ದರ್ಶನ | |
| 21 | Karnataka History & Culture (ED) | |

ಎಂ.ವಿ ಶ್ರೀನಿವಾಸರವರು ಹುಟ್ಟು ಬರಹಗಾರರು. ಚಿಕ್ಕ ವಯಸ್ಸಿನಿಂದಲೂ ಸಾಹಿತ್ಯದಲ್ಲಿ ಬರವಣಿಗೆಯಲ್ಲಿ ಅವರು ವಿಶೇಷ ಆಸಕ್ತಿಯನ್ನು ಶ್ರದ್ದೆಯನ್ನು ಬೆಳಸಿಕೊಂಡಿದ್ದರು. ಪ್ರಾಥಮಿಕ ಮತ್ತು ಮಾಧ್ಯಮಿಕ ತರಗತಿಗಳಲ್ಲಿ ಓದುತ್ತಿರುವಾಗಲೇ ಕನ್ನಡದ ಶ್ರೇಷ್ಠ ಗ್ರಂಥಗಳ ಬಗ್ಗೆ ಕುತೂಹಲ ಶ್ರದ್ದೆಯಿಂದ ಅವಕಾಶ ಸಿಕ್ಕಿದಾಗ ಅಭ್ಯಾಸ ಮಾಡುವ ಪದ್ದತಿಯನ್ನು ಇಟ್ಟುಕೊಂಡಿದ್ದರು. ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವ ವೇಳೆಗೆ ಅವರು ಕಾವ್ಯ ರಚನೆಗೆ ಕೈಹಾಕಿದ್ದರು. ಎಂ.ಎ. ತರಗತಿಯಲ್ಲಿ ಮರಾಠ ಇತಿಹಾಸವನ್ನು ಅಭ್ಯಾಸ ಮಾಡುತ್ತಿದ್ದಾಗ ಅಲ್ಲಿ ಕಂಡು ಬರುವ ಬಾಜಿರಾವ್ ಮಸ್ತಾನಿ ಪ್ರಕರಣವನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದರು. ಈ ಉದ್ದೇಶಕ್ಕಾಗಿ ಮಹಾರಾಷ್ಟ್ರದ ಅನೇಕ ಕಡೆ ಕ್ಷೇತ್ರಕಾರ್ಯವನ್ನು ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಿದರು. ಈ ಸಂದರ್ಭದಲ್ಲಿ ಅವರು ಪುಣೆಯಲ್ಲಿದ್ದ ಭಾರತೀಯ ಇತಿಹಾಸ ಸಂಶೋಧನಾ ಮಂಡಲದಲ್ಲಿ ಗ್ರಂಥಗಳನ್ನು, ಅಪ್ರಕಟಿತ ದಪ್ತರ್ ಮೊದಲಾದ ದಾಖಲೆಗಳನ್ನು ಪರಿಶೀಲಿಸಿದರು. ಈ ಎಲ್ಲಾ ಸಾಮಗ್ರಿಗಳನ್ನು ಬಳಸಿಕೊಂಡು ಅವರು ಬರೆದ ಐತಿಹಾಸಿಕ ಕಾದಂಬರಿ ಮಸ್ತಾನಿ ಶ್ರೀನಿವಾಸರವರಿಗೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಸ್ಥಾನವನ್ನು ತಂದುಕೊಟ್ಟಿತು. ಎಂ.ವಿ ಶ್ರೀನಿವಾಸರವರು ಬರೆದ ಅತ್ಯಂತ ಗಮನಾರ್ಹವಾದ ಐತಿಹಾಸಿಕ ಕೃತಿ ರತ್ನಾಕರ ಇದನ್ನು ಅವರು ಪ್ರೊ.ಜಿ.ಬ್ರಹ್ಮಪ್ಪರೊಂದಿಗೆ ರಚಿಸಿದರು. ಈ ಗ್ರಂಥಕ್ಕೂ ಕೂಡ ಅವರು ಉಪಲಬ್ದವಾಗಿದ್ದ ಸಾಹಿತ್ಯ ಆಧಾರಗಳನ್ನು ಬಳಸಿಕೊಂಡಿದ್ದಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾಕಷ್ಟು ಕ್ಷೇತ್ರ ಕಾರ್ಯವನ್ನು ಮಾಡಿ ಉಪಯುಕ್ತವಾದ ಮಾಹಿತಿಯನ್ನು ಸಂಗ್ರಹಿಸಿಕೊಂಡರು. 1961 ರಲ್ಲಿ ಪ್ರಕಟವಾದ ರತ್ನಾಕರ ಐತಿಹಾಸಿಕ ಕಾದಂಬರಿಗೆ ಮೈಸೂರು ಸರ್ಕಾರದ ಸಾಹಿತ್ಯ ಆಕಾಡೆಮಿಯ ಶ್ರೇಷ್ಠ ಕಾದಂಬರಿ ಪ್ರಶಸ್ತಿ ಲಭಿಸಿತು. ಮುಂದೆ ಈ ಗ್ರಂಥವು ತೆಲುಗು, ಹಿಂದಿ, ಗುಜರಾತಿ ಭಾಷೆಗಳಿಗೆ ಅನುವಾದಗೊಂಡಿತು. ಸಮರಸ ಎನ್ನುವ ಲೇಖನಗಳ ಸಂಗ್ರಹ ಬಹಳ ಮುಖ್ಯವಾದುದು. ಜಿಲ್ಲೆಯ ಹೆಸರಾಂತ ಸಾಹಿತಿಗಳು ವಿದ್ವಾಂಸರ ಲೇಖನಗಳನ್ನು ಸಮರಸದಲ್ಲಿ ಪ್ರಕಟಿಸಲಾಯಿತು. ತುಮಕೂರು ಜಿಲ್ಲೆಯ ಬರಹಗಾರರು ಎಂಬ ಒಂದು ಸಂಗ್ರಹದಲ್ಲಿ ಜಿಲ್ಲೆಯ ಲೇಖಕರು ಹಾಗು ಅವರ ಕೃತಿಗಳ ಪರಿಚಯವನ್ನು ಮಾಡಿಕೊಡಲಾಗಿದೆ. 1960–1970ರ ಅವಧಿಯಲ್ಲಿ ಅವರು ಮೂರು ಪುಸ್ತಕಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಸವದತ್ತಿಯ ರಟ್ಟರು ಎನ್ನುವುದು ಬಹಳ

ಮುಖ್ಯವಾದುದು. ಕಲ್ಯಾಣಿ ಚಾಲುಕ್ಯರ ಆಳ್ವಿಕೆಯಲ್ಲಿ ಅವರ ಸಾಮಂತರಾಗಿದ್ದು ರಾಜರನ್ನು ಕುರಿತು ಶಾಸನ, ಸ್ಮಾರಕ ಸಾಹಿತ್ಯ ಮುಂತಾದ ಆಧಾರಗಳನ್ನು ಅಭ್ಯಾಸ ಮಾಡಿ ಅವರು ಈ ಪುಸ್ತಕವನ್ನು ರಚಿಸಿದರು. 1967–72ರ ಅವಧಿಯಲ್ಲಿ ಅವರು ಜವಹರ್ ಲಾಲ್ ನೆಹರು ಮತ್ತು ಅಮೇರಿಕಾದ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗವನ್ನು ಕೈಗೊಂಡಿದ್ದರಿಂದ ಅವರು ಗ್ರಂಥ ರಚನಾ ಕಾರ್ಯವನ್ನು ಸ್ವಲ್ಪಕಾಲ ಸ್ಥಗಿತ ಗೊಳಿಸಬೇಕಾಯಿತು. 75ರ ನಂತರ ಮತ್ತೆ ಅವರ ಸಾಹಿತ್ಯ ಕೃತಿ ಮುಂದುವರಿಯಿತು. 'ರಾಷ್ಟ್ರೋತ್ಥಾನ" ಮಾಲೆಯಲ್ಲಿ ಅವರ ಎರಡು ಪುಸ್ತಕಗಳು ರಣಜಿತ್ ಸಿಂಗ್ ಮತ್ತು ಬಾಜಿರಾವ್ ಒಟ್ಟಿಗೆ ಪ್ರಕಟವಾದವು.

ಚಂದ್ರವಳ್ಳಿ ಎಂಬ ಕೃತಿಯು ಸಾಕಷ್ಟು ಮಾಧ್ಯಮಗಳ ಪ್ರಶಂಸೆಗೆ ಪಾತ್ರವಾಗಿದೆ ಚಿತ್ರದುರ್ಗದ ಸಮಗ್ರ ಇತಿಹಾಸವನ್ನು, ಪ್ರಮುಖ ಹಂತಗಳನ್ನು ಈ ಗ್ರಂಥದ ಲೇಖನಗಳಲ್ಲಿ ವಿವರಿಸಲಾಗಿದೆ. ಅದಲ್ಲದೆ ಅನೇಕ ಹೊಸ ದಾಖಲೆಗಳನ್ನು ಈ ಗ್ರಂಥದಲ್ಲಿ ಸೇರಿಸಲಾಗಿದೆ.

ಚಿತ್ರದುರ್ಗದಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದಾಗ ಅಲ್ಲಿನ ಇತಿಹಾಸವನ್ನಲ್ಲದೆ ಇತಿಹಾಸಕಾರರನ್ನು ಅವರು ಪರಿಚಯ ಮಾಡಿಕೊಳ್ಳುತ್ತಾ ಹೋದರು. ಈ ಸಂದರ್ಭದಲ್ಲಿ ಚಿತ್ರದುರ್ಗದ ಪ್ರಸಿದ್ಧ ಇತಿಹಾಸಕಾರ ಹುಲ್ಲೂರು ಶ್ರೀನಿವಾಸ ಜೋಯಿಸರ ಕೃತಿಗಳು ಅವರ ಗಮನಕ್ಕೆ ಬಂದವು.

ಎಂ.ವಿ. ಶ್ರೀನಿವಾಸರವರೊಂದಿಗೆ ಈ ಕಾರ್ಯದಲ್ಲಿ ಕೈಜೋಡಿಸಿದವರು ಮತ್ತೊಬ್ಬ ಪ್ರತಿಭಾನ್ವಿತ ಸಂಶೋಧಕರಾದ ಲಕ್ಷ್ಮಣ ತೆಲಗಾವಿಯವರು ಜನರಲ್ಲಿ ಸ್ಥಳೀಯ ಇತಿಹಾಸದ ಬಗ್ಗೆ ಆಸಕ್ತಿ ಇಮ್ಮಡಿಸುವಂತೆ ಮಾಡಿದ್ದರು.

ಬೆಳಗೆರೆ ಕೃಷ್ಣಶಾಸ್ತ್ರಿಯವರಿಗೆ 'ಚಿನ್ಮಯ' ಎಂಬ ಸಂಭಾವನಾ ಗ್ರಂಥವನ್ನು ಸಮರ್ಪಿಸಲಾಯಿತು. ಅದರ ಸಂಪಾದಕರು ಡಾ॥ ಎಂ.ವಿ. ಶ್ರೀನಿವಾಸ ಮತ್ತು ಡಾ॥ ಕೃಷ್ಣಮೂರ್ತಿ ಹನೂರು 400 ಪುಟಗಳ ಈ ಗ್ರಂಥವು ಸಾಹಿತ್ಯ, ಇತಿಹಾಸ, ಸಂಸ್ಕೃತಿಗೆ ಸಂಬಂಧಿಸಿದಂತೆ. ಅನೇಕ ಉಪಯುಕ್ತ ಲೇಖನಗಳನ್ನು ಒಳಗೊಂಡಿದ್ದಿತು. ಇತಿಹಾಸಕ್ಕೆ ಸಂಬಂದಪಟ್ಟಂತೆ ಶ್ರೀನಿವಾಸರವರು ಬರೆದ ಗ್ರಂಥಗಳಲ್ಲಿ ಮೂರು ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು.

1972 ರಲ್ಲಿ ಅವರು ಸತ್ಯನಾರಾಯಣರಾವ್ ರೊಂದಿಗೆ ಪ್ರಪಂಚದ ಚರಿತ್ರೆ ಎಂಬ ಪುಸ್ತಕವನ್ನು ಬರೆದಿದ್ದಾರೆ. ಮೈಸೂರಿನ ಗೀತಾ ಬುಕ್ ಹೌಸ್ ಈ ಗ್ರಂಥವನ್ನು ಪ್ರಕಟಿಸಿತು. ಹಾಗೇಯೇ ಇವರು ಕರ್ನಾಟಕ ಇತಿಹಾಸವನ್ನು ಇಂಗ್ಲೀಷ್‌ನಿಂದ ಕನ್ನಡಕ್ಕೆ ಅನುವಾದ ಮಾಡಿದ್ದಾರೆ.

1984 ರಲ್ಲಿ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ಒಂದು ಗ್ರಂಥವನ್ನು ಸಂಪಾದಿಸಿದ್ದಾರೆ. ಇದನ್ನು ತುಮಕೂರಿನ ಇತಿಹಾಸ ಪರಿಷತ್ತು ಪ್ರಕಟಿಸಿದೆ. ಒಲಂಪಿಕ್ ಸ್ಪರ್ಧೆಗಳ ಇತಿಹಾಸವನ್ನು ಕುರಿತ ಪ್ರಜ್ವಲಿಸುವ ಪಂಜು ಎಂಬ ಗ್ರಂಥವನ್ನು ಮೈಸೂರಿನ ನಭಶ್ರಿ ಪ್ರಕಾಶನ ಪ್ರಕಟಿಸಿದೆ. ಎಂ.ವಿ. ಶ್ರೀನಿವಾಸ್ ರವರು ಸಂಪಾದಿಸಿರುವ ಒಂದು ಮಹತ್ತರ ಕೃತಿ ಉಜಾಣಿ

ಠಿಂಟುಣುಛಿ ಠಜಿ ಖಟಜುಚಿ ಎಂಬ ಗ್ರಂಥ. ಇದರಲ್ಲಿ ಶ್ರೀನಿವಾಸರವರು ಉಜಂ ಠಿಂಟುಣುಛಿ ಎನ್ನುವ ವಿಷಯವನ್ನು ಕುರಿತು ವಿದ್ವಾತ್ ಪೂರ್ಣವಾದ ಒಂದು ಪ್ರಸ್ತಾವನೆಯನ್ನು ನೀಡಿದ್ದಾರೆ.

ಎಂ.ವಿ.ಶ್ರೀನಿವಾಸರು. ಇತಿಹಾಸ, ಸಾಹಿತ್ಯ, ಸಂಸ್ಕೃತಿ ಇವುಗಳನ್ನು ಕುರಿತು 150ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ಇವು ಅನೇಕ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹಾಗೇಯೇ ಅನೇಕ ರಾಜ್ಯ ರಾಷ್ಟ್ರ ಮಟ್ಟದ ವಿಚಾರ ಸಂಕಿರಣಗಳಲ್ಲಿ ಸಂಶೋಧನಾ ಪ್ರಬಂಧಗಳನ್ನು ಮಂಡಿಸಿದ್ದಾರೆ. ಸಂಬಂಧಪಟ್ಟ ಸಂಸ್ಥೆಗಳು ಅವರ ಲೇಖನ ಪ್ರಬಂಧಗಳನ್ನು ತಮ್ಮ ಗ್ರಂಥಗಳಲ್ಲಿ ಪ್ರಕಟಿಸಿವೆ. ಲೇಖನಗಳು ಅವರ ಅದ್ಭುತ ಪ್ರತಿಭೆ ಅನುಭವ ಭದ್ರತೆಗೆ ಸಾಕ್ಷಿಯಾಗಿದೆ.

ಅನೇಕ ಸ್ವತಂತ್ರ ಗ್ರಂಥಗಳಲ್ಲದೆ ಎಂ.ವಿ. ಶ್ರೀನಿವಾಸರವರು ಸುಮಾರು 10 ನಿಯತಕಾಲಿಕೆಗಳಲ್ಲಿ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಅವುಗಳಲ್ಲಿ **'ಇತಿಹಾಸ ಚಂದ್ರಿಕೆ', 'ಮಲ್ಲಾರ' 'ಮಾನವಿಕ ಕರ್ನಾಟಕ ಇತಿಹಾಸ'** ಮೊದಲಾದವು ಇತಿಹಾಸ ಕ್ಷೇತ್ರಕ್ಕೆ ಉತ್ತಮವಾದ ಕೊಡುಗೆಯನ್ನು ನೀಡಿದ್ದಾರೆ. ಖಣಣಜುಛ ,ಟಿ ಏಚಿಡಿಟಚಿಣಚಿಞಚಿ ಊಚಿಣಂಡಿಥಿ & ಅಣಟಣಣಡಿಜ ಎಂಬ ಮಾಲಿಕೆಯಲ್ಲಿ ಅವರು ಕರ್ನಾಟಕ ಇತಿಹಾಸ ಕಾಂಗ್ರೆಸ್‌ನ 5 ಸಂಚಿಕೆಗಳನ್ನು ಸಂಪಾದಿಸಿ ಹೊರತಂದಿದ್ದಾರೆ ಗ್ರಂಥರಚನೆ ಸ್ವತಂತ್ರ ಲೇಖನಗಳಲ್ಲದೆ ಇವರು ಅನೇಕ ಪುಸ್ತಕಗಳಿಗೆ ಮುನ್ನುಡಿಗಳನ್ನು ಬರೆದು ಲೇಖಕರಿಗೆ ಪ್ರೋತ್ಸಾಹ ನೀಡಿದ್ದಾರೆ. ಹಾಗೆಯೇ ಇತಿಹಾಸ ಸಾಹಿತ್ಯಕ್ಕೆ ಸಂಬಂಧಿಸಿದ ನೂರಾರು ಗ್ರಂಥ ವಿಮರ್ಶೆಗಳು ಇವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ.

**ಸಂಶೋಧನಾ ವಿಧಾನ:**

ಪ್ರೊ॥ ಎಂ.ವಿ. ಶ್ರೀನಿವಾಸರವರ ಜೀವನ ಮತ್ತು ಸಾಧನೆಗಳನ್ನು ಖಚಿತವಾದ ಆಧಾರಗಳ ನೆರವಿನಿಂದ ಅಭ್ಯಾಸ ಮಾಡಲಾಗಿದೆ. ಅವರ ಎಲ್ಲಾ 26 ಗ್ರಂಥಗಳನ್ನು, ಸುಮಾರು 150 ಕ್ಕೂ ಹೆಚ್ಚು ಸಂಶೋಧನಾ ಲೇಖನಗಳನ್ನು ಅಭ್ಯಾಸ ಮಾಡಿ ಅವರ ಶೈಕ್ಷಣಿಕ ಸಾಧನೆಯನ್ನು ಪರಿಚಯಿಸಿಲಾಗುವುದ ಸಾಲ್ಲದೆ ಅವರ ಸಹಪಾಠಿಗಳು, ಸಹದ್ಯೋಗಿಗಳು, ಬಂದುಮಿತ್ರರು, ಹಿತೈಷಿಗಳನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆದು ಈ ಪ್ರಬಂಧವನ್ನು ಆದಷ್ಟು ಆಸಕ್ತಿಯಿಂದ ರಚಿಸಲಾಗಿದೆ. ಬಾಹ್ಯ ಮತ್ತು ಆಂತರಿಕ ವಿಮರ್ಶೆ ವಿಧಾನವನ್ನು ಅನುಸರಿಸಿ ವೈಜ್ಞಾನಿಕ ವಿಧಾನಗಳಿಂದ ಪ್ರಬಂಧವನ್ನು ರಚಿಸಲಾಗಿದೆ. ಈ ರೀತಿಯಲ್ಲಿ ಪ್ರಕಟಿತ ಅಪ್ರಕಟಿತ ಕೃತಿಗಳನ್ನು ಮೌಖಿಕ ಆಧಾರಗಳನ್ನು ಆಧರಿಸಿ, ವಿದ್ವಾಂಸರಾದ ಪ್ರೊ.ಎಂ.ವಿ. ಶ್ರೀನಿವಾಸರವರ ಜೀವನ ಚರಿತ್ರೆಯನ್ನು ಕೃತಿಗಳ ಮೌಲ್ಯಮಾಪನ ಕಾರ್ಯವನ್ನು ಕೈಗೊಳ್ಳಲಾಗಿದೆ. ಚಿತ್ರದುರ್ಗದಲ್ಲಿ ಶ್ರೀನಿವಾಸ್‌ರವರ ಮಹತ್ವದ ಕೊಡುಗೆ **ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿಯ** ಸ್ಥಾಪನೆ. ಈ ಸಂಸ್ಥೆಯಲ್ಲಿ ಲಕ್ಷ್ಮಣ ತೆಲಗಾವಿ ಬಿ. ರಾಜಶೇಖರಪ್ಪ, ವೆಂಕಣ್ಣಾಚಾರ್, ಜಯಣ್ಣ, ಪ್ರಭಾಕರ್ ಪಾಂಡುರಂಗ ಜೋಯಿಸ್ ಮೊದಲಾದ ಇತಿಹಾಸ ಪ್ರೇಮಿಗಳಿದ್ದು ಈ ಸಂಸ್ಥೆ ಇತಿಹಾಸ ಸಂಶೋಧನೆ ಮತ್ತು ಪ್ರಕಟಣೆ ಕಾರ್ಯಗಳನ್ನು ಕೈಗೊಂಡು ನಾಡಿನ ಬಹು ಯಶಸ್ವಿ ಸಂಶೋಧನಾ ಸಂಸ್ಥೆ ಎಂಬ ಖ್ಯಾತಿಯನ್ನು ಗಳಿಸಿತು.

ಚಿತ್ರದುರ್ಗದ ಹುಲ್ಲೂರು ಶ್ರೀನಿವಾಸ ಜೋಯಿಸರು ಚಿತ್ರದುರ್ಗದ ಬಗ್ಗೆ ಸಾಕಷ್ಟು ಕೆಲಸ ಮಾಡಿ ಹೆಸರು ಗಳಿಸಿದ್ದರು. ಅವರು ಬರೆದ ಲೇಖನಗಳನ್ನು ಒಂದು ಕಡೆ ಸೇರಿಸುವ ಕಾರ್ಯವಾಗಬೇಕಾಗಿತ್ತು. ಈ ಕಾರ್ಯವನ್ನು ಕೈಗೆತ್ತಿಕೊಂಡು ಲಕ್ಷ್ಮಣ ತೆಲಗಾವಿ ಅವರೊಂದಿಗೆ ಐತಿಹಾಸಿಕ ಲೇಖನಗಳು ಮತ್ತು ಸಂಶೋಧನಾ ಲೇಖನಗಳು ಎಂಬ ಗ್ರಂಥಗಳನ್ನು ಸಂಪಾದಿಸಿ ಹೊರತಂದ್ದು ಶ್ರೀನಿವಾಸ ಜೋಯಿಸರ ಒಟ್ಟು ಐದು ಕೃತಿಗಳನ್ನು ಸಂಪಾದಿಸಿ ಅವರ ಕೃತಿಗಳು ವಿದ್ವಾಂಸರಿಗೆ ಲಭಿಸುವಂತೆ ಮಾಡಿದ್ದಕ್ಕಾಗಿ ಪ್ರಶಂಸೆಯ ಸುರಿಮಳೆಯಾಯಿತು. ಚಿತ್ರದುರ್ಗದಲ್ಲಿದ್ದಾಗಲೇ ಬೆಳಗೆರೆ ಕೃಷ್ಣಶಾಸ್ತ್ರಿಯವರನ್ನು ಕುರಿತ ಒಂದು ಅಭಿನಂದನ ಗ್ರಂಥ ಬೆಳೆಗೆರೆ ಚಂದ್ರಶೇಖರ ಶಾಸ್ತ್ರಿಗಳನ್ನು ಕುರಿತ ಲೇಖನಗಳ ಸಂಗ್ರಹ ಹಾಗೂ ಅವರ ಕವನಗಳ ಸಂಗ್ರಹ ಮೊದಲ ಎರಡು ಪುಸ್ತಕಗಳು ಕೃಷ್ಣ ಮೂರ್ತಿ ಹನೂರು ಅವರ ಸಹಯೋಗದೊಂದಿಗೆ ರಚಿತವಾಗಿವೆ. ವಿವಿಧ ಸಾಂಸ್ಕೃತಿಕ ಸಂಘಗಳಿಂದ ಒಟ್ಟು 14 ಪುಸ್ತಕಗಳ ಪ್ರಕಟಣೆಯಲ್ಲಿ ಅವರು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಭಾಗವಹಿಸಿದ್ದರು. ಈ ಪುಸ್ತಕಗಳನ್ನು ಕುರಿತು ಪತ್ರಿಕೆಗಳು ಮುಕ್ತಕಂಠದಿಂದ ಪ್ರಶಂಸಿದವು.

ತಮ್ಮ ಪುಸ್ತಕಗಳ ಬಗ್ಗೆ ಪ್ರಶಂಸೆಯ ಮಳೆಯಾದುದಕ್ಕಿಂತಲು ಅಲ್ಲಿನ ಜನರು ಪುಸ್ತಕಗಳನ್ನು ಓದುತ್ತಾ ಬಂದರು. ಅವರಲ್ಲಿ ಸ್ವಲ್ಪ ಮಟ್ಟಿನ ಇತಿಹಾಸ ಪ್ರಜ್ಞೆ ಬೆಳೆಯಲು ಅದು ಸಹಕಾರಿಯಾಯಿತೆಂಬುದು ತಮಗೆ ಹೆಚ್ಚು ಸಮಾಧಾನಕರವಾದ ವಿಷಯವೆಂದು ಶ್ರೀನಿವಾಸರವರು ಭಾವಿಸುತ್ತಾರೆ. ತಮ್ಮ ಬೋಧನೆ ಮತ್ತು ಬರವಣಿಗೆಯಿಂದ ವಿದ್ಯಾರ್ಥಿಗಳಿಗೆ ಹಾಗೂ ಸ್ಥಳೀಯ ಜನರಿಗೆ ಇತಿಹಾಸದ ಶುದ್ದ ವೈಜ್ಞಾನಿಕ ಸ್ವರೂಪ ದರ್ಶನ ಮಾಡಿಸಲು ಸಾದ್ಯವಾದದ್ದು ತಮಗೆ ಬಹಳಷ್ಟು ತೃಪ್ತಿಯನ್ನು ತಂದುಕೊಟ್ಟಿತೆಂದು ಪ್ರೊ.ಶ್ರೀನಿವಾಸ್ ಇಂದು ಸ್ಮರಿಸಿಕೊಳ್ಳುತ್ತಾರೆ.

ಸಂಶೋಧನಾ ರಂಗದಲ್ಲಿ ವಿಷಯ ಯಾವುದೇ ಆಗಿದ್ದರೂ ಆ ವಿಷಯಗಳನ್ನು ಕುರಿತು ಸಂಶೋಧನಾ ಪುಸ್ತಕಗಳ ಸಂಖ್ಯೆಗೆ ನೂರ್ಮಡಿಯಷ್ಟು ಸಂಶೋಧನಾತ್ಮಕ ಲೇಖನಗಳು ಪ್ರಕಟಗೊಳ್ಳುತ್ತವೆ. ಗತಿಸಿಹೋದ ಸಂಶೋಧಕರ ಸಮಸ್ತ ಲೇಖನಗಳನ್ನು ಒಂದೆಡೆ ಸಂಗ್ರಹಿಸಿ ಕೊಡುವುದು ತುಂಬ ಉಪಯುಕ್ತವಾದ ಕಾರ್ಯವಾಗುತ್ತದೆ. ಪ್ರೊ.ಲಕ್ಷ್ಮಣ ತೆಲಗಾವಿ ಮತ್ತು ಡಾ॥ ಎಂ.ವಿ.ಶ್ರೀನಿವಾಸ ಅವರು ಸ್ವತಃ ಸಂಪಾದನೆ ಮಾಡಿದ ಜ್ಞಾನದ ಬಲದಿಂದ ಪ್ರಖ್ಯಾತ ವಿದ್ವಾಂಸರೆನಿಸಿದ ಹುಲ್ಲೂರು ಶ್ರೀನಿವಾಸ್ ಜೋಯಿಷರ ಸಂಶೋಧನ ಲೇಖನಗಳನ್ನು ಸಮಗ್ರವಾಗಿ ಸಂಗ್ರಹಿಸಿಕೊಟ್ಟು ಉಪಯುಕ್ತ ಕೆಲಸ ಮಾಡಿದ್ದಾರೆ.

ಶ್ರೀನಿವಾಸ ಜೋಯಿಷರು ಮಾಡಿದ ಸಂಶೋಧನೆಯನ್ನು ಅನುಕರಿಸಿ ಇತರರು ಮುಂದುವರಿಸಿದ ಸಂಶೋಧನೆಯ ಫಲಗಳನ್ನು, ಅಧ್ಯಯನಗಳ ಸಾರವನ್ನು ಸಂಪಾದಕರು ತುಂಬ ಶ್ರಮವಹಿಸಿಕೊಟ್ಟಿರುವುದು ಅತ್ಯಂತ ಉಪಯುಕ್ತವೂ ಶ್ಲಾಘನೀಯವೂ ಆಗಿದೆ. ಜೋಯಿಷರ ಸಂಶೋಧಕರ ಶ್ರದ್ದೆಯನ್ನರಿಯಲು ಈ ಪುಸ್ತಕ ಸಹಾಯ ಮಾಡುವುದರೊಡನೆ ಈ ವಿಷಯಗಳಲ್ಲಿ ಇಂದು ಸಂಶೋಧನೆಯನ್ನು ಮುಂದುವರಿಸಲು ಈ ಪುಸ್ತಕ ದಿಕ್ಸೂಚಿಯಾಗಿದೆ. ಈ ಪುಸ್ತಕಕ್ಕೆ ನಿಜವಾದ ಘನತೆ ಉಂಟಾಗಿರುವುದು ಅನುಬಂದಗಳಿಂದ, ಸಂಪಾದಕದ್ವಯರ ಈ ಕೊಡುಗೆ ಅನುಕರಣೀಯ ಶ್ಲಾಘನೀಯ ವಿದ್ವತ್ ಶ್ರದ್ದೆ ಪರಿಶ್ರಮಗಳ ಸಂಗಮವಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

# ಅಧ್ಯಾಯ –2
## ಎಂ.ವಿ.ಶ್ರೀನಿವಾಸರವರ ಬಾಲ್ಯ ವಿದ್ಯಾಭ್ಯಾಸ.

ಎಂ.ವಿ.ಶ್ರೀನಿವಾಸರವರು ಬೆಂಗಳೂರು ಜಿಲ್ಲೆಯ ಈಗ ನಗರದ ವ್ಯಾಪ್ತಿಗೆ ಸೇರಿರುವ ಮತ್ತಿಕೆರೆಯಲ್ಲಿ ಜನಿಸಿದರು. (13–2–1936) ಅವರ ತಂದೆ ವೆಂಕಟಪ್ಪ ತಾಯಿ ಪಾರ್ವತಮ್ಮ ಮಧ್ಯಮ ವರ್ಗದ ಈ ದಂಪತಿಗಳಿಗೆ 5 ಜನ ಮಕ್ಕಳು. ದಂಪತಿಗಳಿಬ್ಬರು ಹೆಚ್ಚು ಓದಿದವರಲ್ಲ ಹಾಗೇಯೇ ಹುಟ್ಟಿನಿಂದ ವಂಶ ಪಾರಂಪರ್ಯವಾದ ಸಂಪತ್ತನ್ನು ತಮ್ಮೊಡನೆ ತಂದಿರಲಿಲ್ಲ. ವೆಂಕಟಪ್ಪನವರು ಕುಶಲ ಕರ್ಮಿಗಳಾಗಿದ್ದು ಮನೆ ಕಟ್ಟುವ ಕಾಯಕದಲ್ಲಿದ್ದು ಅನಂತರ ಕಂಟ್ರಾಕ್ಟರ್ ಆಗಿ ಅನೇಕ ವರ್ಷಗಳ ಕಾಲ ಕೆಲಸ ಮಾಡಿಕೊಂಡಿದ್ದರು. ವೆಂಕಟಪ್ಪನವರ ಪೂರ್ವಜರು ಮಧುಗಿರಿ ಮಿಡಿಗೇಶಿ ಪ್ರದೇಶದಲ್ಲಿದ್ದವರು ಅವರ ವಂಶದವರು ತುಮಕೂರು ಜಿಲ್ಲೆಯ ಉತ್ತರ ಭಾಗದಲ್ಲಿ ಸಮಾಜದಲ್ಲಿ ಗಣ್ಯ ಸ್ಥಾನವನ್ನು ಪಡೆದಿದ್ದರು. ಇವರ ವಂಶದವರು ಬಹಳ ಹಿಂದೆ 16ನೇ ಶತಮಾನದಲ್ಲಿ ತುಮಕೂರು ಜಿಲ್ಲೆಯ ಉತ್ತರ ಭಾಗದ ಒಂದು ಪಾಳೇಯ ಪಟ್ಟಿನ ನಾಯಕರಾಗಿದ್ದರೆಂದು ಇವರ ವಂಶಜರು ತಿಳಿಸುತ್ತಾರೆ. ಅದರ ಬಗ್ಗೆ ದಾಖಲೆಗಳಾಗಲೀ ಖಚಿತವಾದ ಮಾಹಿತಿಯಾಗಲೀ ಲಭ್ಯವಿಲ್ಲ ಮತ್ತಿಕೆರೆಯಲ್ಲಿ ಹಲವಾರು ವರ್ಷಗಳ ಕಾಲ ಬಂಧು ಬಾಂಧವರೊಡನೆ ವೆಂಕಟಪ್ಪನವರು ಜೀವಿಸುತ್ತಿದ್ದರು. ಮತ್ತಿಕೆರೆ ಆಗ ಒಂದು ಸಣ್ಣ ಜೋಡಿಗ್ರಾಮ ಅದು ಹೆಚ್ಚಿನ ನಾಗರೀಕ ಸೌಲಭ್ಯಗಳನ್ನಾಗಲೀ, ಅನುಕೂಲಗಳನ್ನಾಗಲೀ ಹೊಂದಿರಲಿಲ್ಲ 40ರ ದಶಕದಲ್ಲಿ 2ನೇ ಮಹಾಯುದ್ಧವು ಆರಂಭವಾದಾಗ ಭಾರತೀಯರು, ಮೈಸೂರಿನವರು ಹಲವಾರು ತೊಂದರೆಗಳನ್ನು ಅನುಭವಿಸಬೇಕಾಗಿದ್ದಿತು. ಬ್ರಿಟೀಷ್ ಸರ್ಕಾರವು ಜನರ ಮೇಲೆ ಅನೇಕ ನಿರ್ಬಂಧಗಳನ್ನು ಹೇರಿದ್ದರು ಇಂತಹ ಸ್ಥಿತಿಯಲ್ಲಿ ವೆಂಕಟಪ್ಪನವರು ಬೆಂಗಳೂರಿನಿಂದ ತುಮಕೂರು ಜಿಲ್ಲೆಯ ಹಿರೇಹಳ್ಳಿಗೆ ಹೋಗಿ ನೆಲಸಿದರು. ಪ್ರಾರಂಭದಲ್ಲಿ ಕೆಲವು ವರ್ಷ ತಮ್ಮ ಸಂಬಂಧಿಗಳ ಮನೆಯಲ್ಲೇ ವೆಂಕಟಪ್ಪನವರ ಕುಟುಂಬವು ನೆಲೆ ನಿಂತಿದ್ದಿತು. ಕೆಲ ವರ್ಷಗಳ ನಂತರ ಅವರು ಒಂದು ಸ್ವಂತ ಮನೆಯನ್ನು ಮಾಡಿಕೊಂಡು ನೆಲೆ ನಿಂತರು. ಎಂದಿನಂತೆ ವೆಂಕಟಪ್ಪನವರಿಗೆ ಯಾವುದಾದರೂ ಲಾಭಾದಾಯಕ ವೃತ್ತಿಯಾಗಲೀ ಉದ್ಯಮವಾಗಲೀ ಇರಲಿಲ್ಲ. ಅವರು ಸಣ್ಣ ಪುಟ್ಟ ಮರದ ವ್ಯಾಪಾರ ಮನೆಕಟ್ಟುವುದಕ್ಕೆ ಮರಗಳ ಸರಬರಾಜು ವೃತ್ತಿಯಲ್ಲೆ ತಮ್ಮನ್ನು ತೊಡಗಿಸಿಕೊಂಡರು. ಮನೆಯಲ್ಲಿದ್ದ 3 ಜನ ಮಕ್ಕಳು ಮತ್ತು ತಾಯಿ ಕಷ್ಟದಿಂದ ಜೀವಿಸಬೇಕಾಗಿತ್ತು. ಶ್ರೀನಿವಾಸರವರು ಮತ್ತು ಅವರ ಕುಟುಂಬ ಇದ್ದ ಹಿರೇಹಳ್ಳಿ ಗ್ರಾಮವು ತುಮಕೂರು ಬೆಂಗಳೂರು ಹೆದ್ದಾರಿಯಲ್ಲಿ 12 ಕಿ.ಮಿ, ಬೆಂಗಳೂರಿಗೆ 58 ಕಿ.ಮಿ. ದೂರದಲ್ಲಿ ಇರುವ ಒಂದು ಸಣ್ಣ ಗ್ರಾಮ.

ಸುಮಾರು 1000 ಜನಸಂಖ್ಯೆ ಇದ್ದ ಈ ಹಳ್ಳಿಯಲ್ಲಿ ಹೆಚ್ಚಿನ ಪೌರ ಸೌಲಭ್ಯಗಳಾಗಲೀ ಇನ್ನಿತರ ಅನುಕೂಲಗಳಾಗಲೀ ಇರಲಿಲ್ಲ. ಆದೃಷ್ಟಕ್ಕೆಂಬಂತೆ ಊರಿನಲ್ಲಿ ಒಂದು ಸಣ್ಣ ಪ್ರಾಥಮಿಕ ಶಾಲೆ ಇದ್ದಿತು. ಶ್ರೀನಿವಾಸರವರ ವಿದ್ಯಾಭ್ಯಾಸ ಆರಂಭವಾಗಿದ್ದು ಈ ಪುಟ್ಟ ಶಾಲೆಯಲ್ಲಿಯೇ, ಈ ಶಾಲೆ ನಮ್ಮ ನಾಡಿನ ಅನೇಕ ಸರ್ಕಾರಿ ಶಾಲೆಗಳಂತೆ ಸಾಕಷ್ಟು ಉಪಾಧ್ಯಾಯರುಗಳನ್ನಾಗಲೀ ಶಾಲೆಗೆ ಅಗತ್ಯವಾದ ಮೂಲಭೂತ ಸೌಲಭ್ಯಗಳನ್ನಾಗಲೀ ಹೊಂದಿರಲಿಲ್ಲ ಆದರೂ ಅನಕ್ಷರತೆ ಇದ್ದರೂ ಕೂಡ ಗ್ರಾಮದ ಬಹುಸಂಖ್ಯಾತ ಕೋಮಿನವರು ಊರಿನ ವ್ಯವಹಾರಗಳಲ್ಲಿ ತಮ್ಮ

ಯಜಮಾನಿಕೆಯನ್ನು ಸ್ಥಾಪಿಸಿಕೊಂಡಿದ್ದರು. ಗ್ರಾಮದಲ್ಲಿ ಯಾವುದೇ ರೀತಿಯ ಭಿನ್ನಾಭಿಪ್ರಾಯ ವೈಮನಸ್ಯ, ಘರ್ಷಣೆಗಳಿರದಿದ್ದರೂ ಜನರು ಯಾವುದೇ ಹೆಚ್ಚಿನ ತೊಂದರೆಗಳಿಲ್ಲದೆ ಸಾಕಷ್ಟು ನೆಮ್ಮದಿಯಿಂದ ಬಾಳನ್ನು ಸವೆಸುತ್ತಿದ್ದರು. ತಮಗೆ ಸಿಕ್ಕಿದ ಈ ಅವಕಾಶದಲ್ಲಿ ಶ್ರೀನಿವಾಸರವರು ಶ್ರದ್ದೆಯಿಂದ ಅಭ್ಯಾಸ ಮಾಡುತ್ತಾ ಬಂದರು. ಆದರೆ ಚಿಕ್ಕ ಗ್ರಾಮದ ಹಿರೇಹಳ್ಳಿಯಲ್ಲಿ ಮಾಧ್ಯಮಿಕ ಶಾಲೆ ಇರಲಿಲ್ಲ. ಆದುದರಿಂದ ಪ್ರಾಥಮಿಕ ಶಾಲೆಯ ವಿದ್ಯಭ್ಯಾಸವನ್ನು ಮುಗಿಸಿಕೊಂಡು ಪಕ್ಕದಲ್ಲಿದ್ದ ಕ್ಯಾತ್ಸಂದ್ರದಲ್ಲಿ ಮಾಧ್ಯಮಿಕ ಶಾಲೆಗೆ ಸೇರಿಕೊಂಡರು. ಈ ಊರು ಹಿರೇಹಳ್ಳಿಗಿಂತಲೂ ದೊಡ್ಡದಾಗಿದ್ದು ಹೆಚ್ಚಿನ ಜನಸಂಖ್ಯೆಯನ್ನು ಹೊಂದಿತ್ತು. ಇದು ಸಿದ್ದಗಂಗೆಗೆ ಅತೀ ಸಮೀಪದಲ್ಲಿದುದರಿಂದ ಧಾರ್ಮಿಕ,ಸಾಮಾಜಿಕ, ಆರ್ಥಿಕ, ಹಾಗೂ ಶೈಕ್ಷಣಿಕವಾಗಿ ಬೆಳೆಯಲು ಅವಕಾಶವಿದ್ದಿತು. ಆದರೆ ಹಿರೇಹಳ್ಳಿಯಿಂದ ಕ್ಯಾತ್ಸಂದ್ರಕ್ಕೆ ಪ್ರತಿದಿನ ಶಾಲೆಗಾಗಿ ಹೋಗಿಬರಬೇಕಾಗಿದ್ದಿತು. ಹಿರೇಹಳ್ಳಿ ಕ್ಯಾತ್ಸಂದ್ರದ ನಡುವೆ ರೈಲು ಮಾರ್ಗವಿದ್ದರು ರೈಲು ಕೆಲವೇಳೆ ತಡವಾಗಿ ಬರುತ್ತಿತ್ತು. ಅಂತಹ ಸಂದರ್ಭಗಳಲ್ಲಿ ವಿದ್ಯಾರ್ಥಿಗಳು ನಡೆದು ಕೊಂಡು ಶಾಲೆಗೆ ಹೋಗಬೇಕಾಗಿದ್ದಿತು.

ಮನೆಯಲ್ಲಿ ಹೆಚ್ಚಿನ ವರಮಾನವಿಲ್ಲ ಅಧ್ಯಯನಕ್ಕೆ ಅಗತ್ಯ ಸೌಲಭ್ಯವಿಲ್ಲ ಓದುವುದಕ್ಕೆ ತಕ್ಕ ಸಹಪಾಠಿಗಳು ಇರುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಶ್ರೀನಿವಾಸರವರು ಅವರ ಒಬ್ಬ ಅಣ್ಣ ರಾಮಕೃಷ್ಣಯ್ಯ ಮತ್ತು ಸಹೋದರ ರಾಮಮೂರ್ತಿಯವರು ಈ ಶಾಲೆಯಲ್ಲಿ ಕಷ್ಟಪಟ್ಟು ಓದುತ್ತಾ ಬಂದರು.

ಶಾಲೆಯಲ್ಲಿ ನುರಿತ ಅನುಭವಿ ಶಿಕ್ಷಕರಿದ್ದುದರಿಂದ ಅಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳು ಶಾಲೆಯಲ್ಲಿ ಓದಿ ಮುಂದೆ ಬರುವುದಕ್ಕೆ ಅವಕಾಶವಾಯಿತು. ಮಾಧ್ಯಮಿಕ ಶಾಲೆಯ ಪಠ್ಯಕ್ರಮವಲ್ಲದೆ ಹಲವಾರು ಪಠ್ಯೇತರ ಚಟುವಟಿಕೆಗಳು ಅಭ್ಯಾಸಕ್ಕೆ ಅನುಕೂಲವಾಗಿದ್ದವು. ಅದರಲ್ಲಿ ವಿದ್ಯಾರ್ಥಿಗಳಿಗೆ ಓದಲು ಕೊಡುತ್ತಿದ್ದ ಗ್ರಂಥಗಳು ಒಂದು ಸಣ್ಣ ಪೆಟ್ಟಿಗೆಯಲ್ಲಿದ್ದ ಸಾಹಿತ್ಯದ ಭಂಡಾರ ಬಾಲಕನಾಗಿದ್ದ ಎಂ.ವಿ. ಶ್ರೀನಿವಾಸರವರಿಗೆ ಅತ್ಯಂತ ಆಕರ್ಷಕ ವಸ್ತುವಾಗಿದ್ದಿತು. ಹೀಗೆ ಕಷ್ಟಗಳ ಸರಮಾಲೆಯಲ್ಲಿ ಸಿಕ್ಕಿದ್ದರೂ ಸಹ ಅವರು ಶ್ರದ್ದೆಯಿಂದ ಓದುತ್ತಾ ಹೋದರು. 40ರ ದಶಕದಲ್ಲಿ ನಮ್ಮ ನಾಡಿನಲ್ಲಿದ್ದ ಶೈಕ್ಷಣಿಕ ವಾತಾವರಣದಲ್ಲಿ ಸಾಧಾರಣ ಕುಟುಂಬದಲ್ಲಿ ಜನಿಸಿದ ಬಾಲಕನೊಬ್ಬನು ಓದಿ ಮುಂದೆ ಬರುವುದು ಸಾಧಾರಣ ವಿಷಯವಾಗಿರಲಿಲ್ಲ. ಮನೆಯಲ್ಲಿ ತಂದೆ ತಾಯಿ ಇಬ್ಬರು ಹೆಚ್ಚು ಓದಿದವರಲ್ಲ. ಆದರೂ ವಿದ್ಯೆಯೊಂದೆ ತಮಗೆ ಆಸ್ತಿ ಎಂದು ನಂಬಿಕೊಂಡಿದ್ದು ಹೇಗೋ ಕಷ್ಟಪಟ್ಟು ಮಕ್ಕಳನ್ನು ಓದಿಸುತ್ತಾಹೋದರು. ಇಂತಹ ಪರಿಸ್ಥಿತಿಯಲ್ಲಿಯೂ ಹಲವಾರು ಸದಾವಕಾಶಗಳು ಲಭಿಸಿದ್ದು ಈ ಬಾಲಕನ ಅದೃಷ್ಟವಾಗಿದ್ದಿತು. ಅಂದಿನ ಕಾಲದಲ್ಲಿ ಒಂದು ಸಣ್ಣ ಮೊತ್ತದ ಸಂಬಳಕ್ಕೆ ಕೆಲಸಮಾಡುತ್ತಿದ್ದ ಅನೇಕ ಶಾಲಾ ಶಿಕ್ಷಕರು, ಬುದ್ದಿವಂತರು ನುರಿತ ಬೋಧಕರು ಆಗಿರುತ್ತಿದ್ದರು. ಒಬ್ಬ ಪ್ರತಿಭಾವಂತ ಶಿಕ್ಷಕ ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಶ್ರದ್ದೆಯಿಂದ ಪಾಠಮಾಡಿ ಅವರು ಹೇಗೆ ಓದಿ ಮುಂದೆ ಸಾಗಬೇಕೆಂಬ ಮಾರ್ಗವನ್ನು ತೋರಿಸುವವರು ಇದ್ದರು. ಅಂತಹ ದಾರಿದೀಪಗಳಾದ ಸ್ಫೂರ್ತಿ ಪಡೆದು ಶ್ರೀನಿವಾಸರವರು ಅವರ ಸಹೋದರರು ಶೈಕ್ಷಣಿಕ ಕ್ಷೇತ್ರದ ಪರ್ವತದ ಮೆಟ್ಟಿಲುಗಳನ್ನು ಕಷ್ಟಪಟ್ಟು ಹತ್ತುತ್ತಾ ಮೇಲೆ ಸಾಗಿದರು. ಮಾಧ್ಯಮಿಕ ಶಾಲೆಯಲ್ಲಿ ಸಾಕಷ್ಟು ಆಸಕ್ತಿಯಿಂದ ಓದಿ ಶಿಕ್ಷಕರ

ಮೆಚ್ಚುಗೆಗೆ ಶ್ರೀನಿವಾಸ ಪಾತ್ರರಾದರು. ಶಾಲೆಯಲ್ಲಿ ನಡೆದ ಅನೇಕ ಸ್ಪರ್ಧೆಗಳಲ್ಲಿ ಬಹುಮಾನಗಳನ್ನು ಗಳಿಸಿದರು.

ಚರ್ಚಾಸ್ಪರ್ಧೆ, ನಾಟಕ, ಕವನ ವಾಚನ ಮೊದಲಾದವುಗಳಲ್ಲಿ ಶ್ರೀನಿವಾಸರವರು ಹೆಚ್ಚು ಆಸಕ್ತಿಯನ್ನು ತೋರಲಾರಂಭಿಸಿದರು. ಈ ಸಮಯದಲ್ಲಿಯ ಅಂದರೆ ಅವರು ಮಾಧ್ಯಮಿಕ ಶಾಲೆ ಓದುತ್ತಿರುವಾಗಲೇ ಬರವಣಿಗೆಯ ಗೀಳುಕೂಡ ಪ್ರಾರಂಭವಾಗಿದ್ದಿತು. ಆಗಾಗ ಅವರು ಕೆಲವು ಕವನಗಳನ್ನು ರಚಿಸಿದರು. ಹೃದಯದಾಳದಲ್ಲಿ ಹುದುಗಿದ್ದ ಭಾವನೆಗಳನ್ನು ಹೊರಹೊಮ್ಮಲು ಈ ಕವನ ರಚನೆ ಒಂದು ಒಳ್ಳೆಯ ವಾಹಿನಿ ಯಾಗಿದ್ದಿತು.

ಭಾರತದಾದ್ಯಂತ ಸ್ವಾತಂತ್ರ ಚಳುವಳಿ ವ್ಯಾಪಕವಾಗಿ ಮುಂದುವರಿದಿದ್ದಿತ್ತು ಶಾಲಾ-ಕಾಲೇಜುಗಳಿಗೂ ಅದರ ಬಿಸಿ ತಟ್ಟಿದ್ದಿತು. ತುಮಕೂರಿಗೆ ಬಹು ಸಮೀಪವಾಗಿದ್ದ ಕ್ಯಾತ್ಸಂದ್ರವು ಸ್ವತಂತ್ರ ಯೋದರ ಒಂದು ಪ್ರಮುಖ ಕೇಂದ್ರವಾಗಿದ್ದಿತು. ಸ್ವಾತಂತ್ರ ಚಳುವಳಿಯಲ್ಲಿ ಭಾಗವಹಿಸುವಷ್ಟು ಪ್ರೌಢರಲ್ಲದಿದ್ದರೂ ಅದರ ಮಹತ್ವವನ್ನು ಅರಿತುಕೊಂಡಿದ್ದು ರಾಷ್ಟ್ರೀಯ ಸಂಗ್ರಾಮಕ್ಕೆ ತಮ್ಮ ಕೊಡುಗೆ ಎಂಬಂತೆ ದೇಶ ಭಕ್ತಿಗೀತೆಗಳನ್ನು ರಚಿಸುತ್ತಿದ್ದರು.

ಶಾಲೆಯಲ್ಲಿದ್ದ ಕೆಲವು ನಲವತ್ತರ ದಶಕದ ಸಾಹಿತ್ಯಕೃತಿಗಳ ಅಧ್ಯಯನ ಅವರ ಮೇಲೆ ಗಾಡವಾದ ಪ್ರಭಾವ ಬೀರಿದ್ದವು ಇವೆಲ್ಲ ಶಕ್ತಿಗಳು ಶ್ರೀನಿವಾಸರ ವ್ಯಕ್ತಿತ್ವವನ್ನು ರೂಪಿಸಿದ ಶಕ್ತಿಗಳಾಗಿದ್ದವು.

ಮಾಧ್ಯಮಿಕ ಶಾಲೆಯ ಪರೀಕ್ಷೆಯಲ್ಲಿ ಪ್ರಥಮ ದರ್ಜೆಯಲ್ಲಿ ಪಾಸಾಗಿ ತುಮಕೂರಿನ ಸಿದ್ದಗಂಗಾ ಹೈಸ್ಕೂಲಿನಲ್ಲಿ ಪ್ರವೇಶ ಪಡೆದುಕೊಂಡು ತಮ್ಮ ಓದನ್ನು ಮುಂದುವರಿಸಿದರು. ಅಂದಿನ ದಿನಗಳಲ್ಲಿ ಸಿದ್ದಗಂಗಾ ಪ್ರೌಢಶಾಲೆಯಲ್ಲಿಯೂ ಬಹಳ ಉತ್ತಮ ಉಪಾಧ್ಯಾಯರಿದ್ದು ಉತ್ತಮವಾದ ಶೈಕ್ಷಣಿಕ ವಾತಾವರಣವು ನೆಲಸಿದ್ದುದು ಅವರಿಗೆ ಅನುಕೂಲಕರವಾಗಿ ಪರಿಣಮಿಸಿತ್ತು. ಆ ಶಾಲೆಯಲ್ಲಿ ಇಂಗ್ಲೀಷ್, ವಿಜ್ಞಾನ, ಸಂಸ್ಕೃತ, ಸಮಾಜ ವಿಜ್ಞಾನ ಮೊದಲಾದ ವಿಷಯಗಳನ್ನು ಕುರಿತ ಉತ್ತಮ ಮಟ್ಟದ ಬೋಧನೆ ಅವರ ಮೇಲೆ ಗಾಢವಾದ ಪರಿಣಾಮವನ್ನು ಉಂಟುಮಾಡಿದ್ದಿತು.

ಒಳ್ಳೆಯ ಅಂಕಗಳನ್ನು ಗಳಿಸಿದ್ದುದರಿಮದ ಸ್ಕೂಲಿನಲ್ಲಿ ಅವರಿಗೆ ಫ್ರೀಶೀಟ್ ದೊರಕಿತು. ಈಗಿನಂತೆ ಚಿಕ್ಕ ಮಕ್ಕಳು ಸಾವಿರಾರು ರೂಪಾಯಿ ಶುಲ್ಕವನ್ನು ಕೊಟ್ಟು ಓದುವ ಪರಿಸ್ಥಿತಿ ಉಂಟಾಗಿದ್ದರೆ ಅವರು ತಮ್ಮ ಓದನ್ನು ಮುಂದುವರಿಸುವುದು ಸಾಧ್ಯವಾಗುತ್ತಿರಲಿಲ್ಲ. ಆದರೂ ಸಾಕಷ್ಟು ಕಷ್ಟಕಾರ್ಪಣ್ಯಗಳನ್ನು ಎದುರಿಸಬೇಕಾಯಿತು.

ಮನೆಯಲ್ಲಿ ಅನೇಕ ರೀತಿಯ ಗೃಹಕೃತ್ಯಗಳಲ್ಲಿ ಭಾಗಿಯಾಗಬೇಕಾಯಿತು. ಅನಂತರ ಒಂದು ಮುರುಕಲು ಬೈಸಿಕಲ್ಲ ಮೇಲೆ 7 ಮೈಲಿ ಪ್ರಯಾಣ ಮಾಡಿ ಮನೆಯಲ್ಲಿ ವಿದ್ಯುತ್ ದೀಪ ಇರದೆ, ಬೇರಾವ ಸೌಲಭ್ಯಗಳು ಇರದೇ ಹೋದರು, ಓದಲು ಮುಂದೆ ಸಾಗುವ ಛಲ, ತಂದೆ ತಾಯಿಗಳ ಪ್ರೋತ್ಸಾಹ ಅವರು ಹಂತ ಹಂತವಾಗಿ ಮುಂದೆ ಸಾಗಲು ಪ್ರೇರಣೆ ನೀಡಿದವು.

ಹೈಸ್ಕೂಲ್ ದಿನಗಳಲ್ಲಿ ಅವರು ಪಠ್ಯೇತರ ಚಟುವಟಿಕೆಗಳಲ್ಲಿ ಆಸಕ್ತಿಯನ್ನು ನೀಡುತ್ತಾ ಬಂದರು ಆಗಾಗ ಒಂದೊಂದು ಬಹುಮಾನಕೂಡ ಸಿಕ್ಕಿತು. ಅದರಿಂದ ಉತ್ತೇಜಿತರಾಗಿ ವಿವಿಧ ಕ್ಷೇತ್ರಗಳಲ್ಲಿ ಪಾಲ್ಗೊಳ್ಳತ್ತಿದ್ದರು. ಇನ್ನೂ ಪರೀಕ್ಷೆಗಳಲ್ಲಿ ಯಾವಾಗಲೂ ಹೆಚ್ಚು ಅಂಕಗಳನ್ನು ಗಳಿಸಿ ಅಗ್ರ ಪಂಕ್ತಿಯಲ್ಲಿ ಸಾಗುತ್ತಾ ಬಂದರು. ಸಿದ್ದಗಂಗಾ ಹೈಸ್ಕೂಲಿನಲ್ಲಿ 3 ವರ್ಷಗಳ ವಿದ್ಯಾಭ್ಯಾಸದ ನಂತರ ಮುಂದೆ ಏನು ಮಾಡುವುದು? ತುಮಕೂರಿನ ಸರ್ಕಾರಿ ಕಾಲೇಜಿನ ಪ್ರವೇಶಕ್ಕೆ ಅರ್ಜಿಯನ್ನು ಸಲ್ಲಿಸಿದರು. ಆಲ್ಲಿ ವಿಜ್ಞಾನ ವಿಭಾಗಕ್ಕೆ ಹೋಗುವುದಕ್ಕೆ ಬದಲಾಗಿ ಕಲೆಯ ವಿಭಾಗದಲ್ಲಿ ಅಧ್ಯಯನ ಮಾಡಿದರು. ಕಾಲೇಜಿನ ಪ್ರಿನ್ಸಿಪಾಲರು ಅಧ್ಯಾಪಕರು ಇಷ್ಟು ಒಳ್ಳೆಯ ಅಂಕಗಳಿದ್ದು ಆರ್ಟ್ಸ್‌ಗೆ ಏತಕ್ಕೆ ಬದಲಾಯಿಸಿಕೊಳ್ಳುತ್ತಿರುವ ಎಂದೂ ಕೇಳಿದಾಗ ಅದು ನನ್ನ ಆಸಕ್ತಿಯ ಕ್ಷೇತ್ರ ಎಂದು ಹೇಳಿ ತಮ್ಮನಿರ್ಧಾರವನ್ನು ಸಮರ್ಥಿಸಿಕೊಂಡರು.

ಕಾಲೇಜಿನ ಶೈಕ್ಷಣಿಕ ವ್ಯವಸ್ಥೆ ಹೈಸ್ಕೂಲಿಗಿಂತಲೂ ಉನ್ನತಮಟ್ಟದ್ದು ಇಲ್ಲಿ ಹೆಚ್ಚು ಅವಕಾಶಗಳಿದ್ದಂತೆ ಜವಾಬ್ದಾರಿಗಳು ಇದ್ದವು ಆದರೆ ಇಂತಹ ಕಷ್ಟಗಳು, ಸವಾಲುಗಳು ಎದುರಿಗೆ ಬಂದಾಗ ಅವುಗಳನ್ನು ಧೃಢಚಿತ್ತದಿಂದ ಎದುರಿಸಿ ಪಾರಾಗುವ ಕಲೆಯನ್ನು ಶ್ರೀನಿವಾಸರವರು ಕರಗತ ಮಾಡಿಕೊಂಡಿದ್ದರು. ಕಾಲೇಜಿನ ಪ್ರಾಧ್ಯಾಪಕರು ಒಳ್ಳೆಯ ವಿದ್ವಾಂಸರಾಗಿ ವಿದ್ಯಾರ್ಥಿಗಳಿಗೆ ಪ್ರತಿಯೊಂದು ವಿಷಯವನ್ನು ವಿದ್ವತ್ ಪೂರ್ಣವಾಗಿ ಬೋಧಿಸುತ್ತಿದ್ದರು. ಈ ಪ್ರಾಧ್ಯಾಪಕರ ಬೋಧನೆ ಅವರ ಶೈಕ್ಷಣಿಕ ಸಾಧನೆ ವಿದ್ಯಾರ್ಥಿ ಶ್ರೀನಿವಾಸರವರ ಮೇಲೆ ಗಾಢವಾದ ಪರಿಣಾಮವನ್ನು ಬೀರಿತು.

ತರಗತಿಯಲ್ಲಿ ಆಸಕ್ತಿಯಿಂದ ಆಲಿಸುತ್ತಿದ್ದುದು ಮಾತ್ರವಲ್ಲ ಅನಂತರ ಅದನ್ನು ತೀವ್ರವಾಗಿ ಅಭ್ಯಾಸ ಮಾಡುವುದಕ್ಕೆ ಪ್ರಯತ್ನ ಮಾಡಿದರು. ಕಾಲೇಜಿನಲ್ಲಿದ್ದ ಗ್ರಂಥಾಲಯದಲ್ಲಿದ್ದ ಪುಸ್ತಕಗಳನ್ನೆ ತ್ವರಿತಗತಿಯಿಂದ ಓದುತ್ತಾ ಹೋದರು. ಈ ಹಂತದಲ್ಲಿಯೂ ಶ್ರೀನಿವಾಸರವರ ಸಾಹಿತ್ಯಾಸಕ್ತಿ ಸ್ವಲ್ಪವು ಕುಂದಿರಲಿಲ್ಲ. ಅವರು ಲಭ್ಯವಿರುವ ಕನ್ನಡ ಮತ್ತು ಇಂಗ್ಲೀಷ್ ಸಾಹಿತ್ಯ ಗ್ರಂಥಗಳನ್ನು ಓದುತ್ತಾ ಹೋದರು. ಹೀಗೆ ಅವರ ಅಭ್ಯಾಸ ತೀವ್ರವಾಗಿ ಸಾಗುತ್ತಿದ್ದಂತೆ ಅವರ ಜ್ಞಾನ ಪೀಪಾಸೆ ಅಷ್ಟೇ ವೇಗದಿಂದ ವೃದ್ಧಿಗೊಂಡಿತ್ತು. ಅವರು ಗ್ರಂಥಾಲಯದಲ್ಲಿದ್ದ ಪುಸ್ತಕಗಳನ್ನು ಓದಿರುವುದಾಗಿಯೂ ತನಗೆ ಇನ್ನು ಹೆಚ್ಚಿನ ಮಾಹಿತಿದಾಖಲೆ, ಬೇಕಾಗಿದೆ ಎಂದು ಭಿನ್ನಯಿಸಿಕೊಂಡರು. ಅದಕ್ಕೆ ಅವರ ಅಧ್ಯಾಪಕರೊಬ್ಬರ ಈ ರೀತಿ ಉತ್ತರ ನೀಡಿದರು. ಅಲ್ಲಿದ್ದ ಪುಸ್ತಕಗಳನ್ನೆಲ್ಲಾ ಏತಕ್ಕೆ ಓದುವುದಕ್ಕೆ ಹೋದೆ ಅವುಗಳನ್ನು ನಾನೇ ಓದಲು ಹೋಗಿಲ್ಲ. ಒಂದೆರಡು ಪುಸ್ತಕಗಳನ್ನು ಓದಿಕೊಂಡರೆ ಸಾಕು ನಿನಗೆ ಒಳ್ಳೆಯ ಅಂಕಗಳು ಪಡೆಯಬಹುದು ಎಂದು ಸಲಹೆ ನೀಡಿದರು.

ಆದರೆ ಶ್ರೀನಿವಾಸರವರು ಅಷ್ಟು ಹೊತ್ತಿಗಾಗಲೇ ತಮ್ಮ ವಿದ್ಯಾಭ್ಯಾಸದ ವಿಧಾನವನ್ನು ನಿರ್ಧರಿಸಿಕೊಂಡಿದ್ದರು. ಅವರು ಅಂಕಗಳನ್ನು ಪಡೆಯಲು ಓದುತ್ತಿರಲಿಲ್ಲ. ಜ್ಞಾನಾರ್ಜನೆ ಅವರ ಜೀವನದ ಪ್ರಮುಖ ಗುರಿಯಾಗಿದ್ದಿತು. ಕಾಲೇಜಿನ ಅಧ್ಯಾಪಕರೂ ಪ್ರಿನ್ಸಿಪಾಲರು ಈ ವಿದ್ಯಾರ್ಥಿಯ ಅಸಾದಾರಣ ಪ್ರತಿಭೆಯನ್ನು ಜ್ಞಾನದಾಹವನ್ನು ವಿಶ್ವಾಸದಿಂದ ನೋಡಿಕೊಳ್ಳತ್ತಿದ್ದರು. ತರಗತಿಯ ಸಹಪಾಠಿಗಳಿಗೆ ಶ್ರೀನಿವಾಸರ ಮೇಲೆ ವಿಶೇಷ ಅಭಿಮಾನ.

ಹೀಗೆ ಕಾಲೇಜಿನ ದಿನಗಳು ಕಳೆದವು 2 ವರ್ಷದ ಇಂಟರ್ ಮೀಡಿಯೇಟ್ ಅಭ್ಯಾಸ ಮುಗಿದು ಅವರು ಪರೀಕ್ಷೆಯಲ್ಲಿ ಭಾಗವಹಿಸಿದರು. ಇಂಟರ್ ಮೀಡಿಯೇಟ್ ಪರೀಕ್ಷೆ (ಕಲಾ ವಿಭಾಗ) ಎಂ.ವಿ. ಶ್ರೀನಿವಾಸ್ ಮೈಸೂರು ರಾಜ್ಯಕ್ಕೆ 6ನೇ ರ‍್ಯಾಂಕನ್ನು ಪಡೆದರು. ಫಲಿತಾಂಶವನ್ನು ಮನೆಯಲ್ಲಿದ್ದ ಶ್ರೀನಿವಾಸರಿಗೆ ಯಾರೋ ತಿಳಿಸಿದಾಗ ಅವರೇನು ಅಷ್ಟೇನು ವಿಚಲಿತರಾಗಲಿಲ್ಲ. ಆದರೆ ತಮ್ಮ ಪರಿಸ್ಥಿತಿಯ ಬಗ್ಗೆ ವಿಮರ್ಶಿಸುತ್ತಾ ಹೋದರು. ಸಾದಾರಣ ಕುಟುಂಬದಲ್ಲಿ ಯಾವುದೇ ರೀತಿಯ ಮಾರ್ಗದರ್ಶನ ಪ್ರೋತ್ಸಾಹ ಸೌಲಭ್ಯ ದೊರಕದೆ ಇದ್ದ ಸಂದರ್ಭದಲ್ಲಿ ಅವರು 6ನೇ ರ‍್ಯಾಂಕನ್ನು ಗಳಿಸಿದ್ದರು. ಅವರ ಕಾಲೇಜಿನಲ್ಲಿ ಇನ್ನು ಹೆಚ್ಚಿನ ಅವಕಾಶಗಳು, ಅನುಕೂಲಗಳು ದೊರೆತಿದ್ದರೆ ಇನ್ನೂ ಹೆಚ್ಚಿನ ಅಂಕಗಳನ್ನು ಗಳಿಸಬಹುದಾಗಿತ್ತಲ್ಲವೇ? ಎನ್ನುವ ಯೋಚನೆ ಒಂದು ಕ್ಷಣ ಬಂದು ಹೋಯಿತು.

ಆದರೆ ಸಂಪತ್ತಾಗಲೀ ಸೌಲಭ್ಯಗಳಾಗಲೀ ದೊರೆತ ಮಾತ್ರಕ್ಕೆ ವಿದ್ಯೆ ಎಲ್ಲರಿಗೂ ಕರಗತವಾಗುವುದೇ ಶ್ರೀಮಂತರು ಹೆಚ್ಚು ಅಂಕ ರ‍್ಯಾಂಕ್ ಏಕೆ ಗಳಿಸುವುದಿಲ್ಲ. ಬೌದ್ಧಿಕ ಕ್ಷೇತ್ರದ ಸಾಧನೆಗೆ ಸಂಪತ್ತು ಅತ್ಯಂತ ಪ್ರಮುಖವಾದ ಅಂಶವಲ್ಲ. ಒಮ್ಮೊಮ್ಮೆ ಅದು ವಿದ್ಯಾರ್ಥಿಗಳಿಗೆ ಸಹಾಯಕವಾಗುವುದಕ್ಕಿಂತ ಮಾರಕವಾಗಬಹುದು. ಬೆಳವಣಿಗೆ ಹಿಂದೆ ಇಂತಹುದೇ ಶಕ್ತಿ ಇರುತ್ತದೆ ಎಂದು ಸ್ಪಷ್ಟವಾಗಿ ಗುರ್ತಿಸಲಾಗುವುದಿಲ್ಲ. ಒಮ್ಮೊಮ್ಮೆ ಯಾವುದೋ ಕಾಣದ ಕೈ ಬೀಸಿ ಕರೆಯುತ್ತದೆ. ಹಿಂದಿನಿಂದ ಮೇಲಕ್ಕೆ ಹೋಗಲು ತಳ್ಳುತ್ತಾ ಮೇಲೆ ಸಾಗಲು ಸಹಾಯ ಮಾಡುತ್ತದೆ. ಹೀಗೆ ಅವರ ವಿದ್ಯಾಭ್ಯಾಸ ಸಾಗುತ್ತಾ ಒಂದು ಹಂತವನ್ನು ತಲುಪಿತು.

1952–53 ಶ್ರೀನಿವಾಸರವರ ಜೀವನದಲ್ಲಿ ಒಂದು ಹೊಸ ಪರ್ವವನ್ನು ಆರಂಭಿಸಿತು ಅವರು ತಮ್ಮ ಹಳ್ಳಿಯಿಂದ ಕರ್ನಾಟಕದ ಬೌದ್ಧಿಕ ರಾಜಧಾನಿಯಾಗಿದ್ದ ಮೈಸೂರಿನಲ್ಲಿ ಉನ್ನತ ವ್ಯಾಸಂಗವನ್ನು ಕೈಗೊಳ್ಳಲು ಪ್ರಯಾಣ ಮಾಡಿದರು. ಮೈಸೂರು ವಿಶ್ವವಿದ್ಯಾನಿಲಯದಲ್ಲದೆ ಅನೇಕ ವಿದ್ಯಾಸಂಸ್ಥೆಗಳನ್ನು ಸಂಶೋಧನಾ ಕೇಂದ್ರಗಳನ್ನು ಹೊಂದಿದ್ದು ಅದು ನಾಡಿನ ಬೌದ್ಧಿಕ ರಾಜಧಾನಿಯೆಂದು ಗ್ರೀಸ್ ದೇಶಕ್ಕೆ ಅಥೆನ್ಸ್ ಇದ್ದಹಾಗೆ ಎಂದು ಅನೇಕರು ಭಾವಿಸಿದ್ದರು. ಮೊಟ್ಟಮೊದಲಿಗೆ ಒಂದು ಟ್ರಂಕನ್ನು ಹಿಡಿದು ಯಾರ ಪರಿಚಯವು, ಸಹಾಯ ವಿಲ್ಲದೆ ಮೈಸೂರಿಗೆ ಆಗಮಿಸಿದ ಈ ಮುಗ್ದ ಬಾಲಕನಿಗೆ ಮೈಸೂರು ನಗರ ಒಂದು ಅದ್ಭುತ ಲೋಕ, ಈ ಸುಂದರ ಸಾಂಸ್ಕೃತಿಕ ವಾತಾವರಣದಲ್ಲಿ ನಾಲ್ಕೈದು ವರ್ಷಗಳ ಕಾಲ ನೆಲೆನಿಂತು ಉನ್ನತವ್ಯಾಸಂಗ ಮಾಡಬೇಕಾಗುತ್ತದೆ. ಆದರೆ ಮೈಸೂರಿನಲ್ಲಿ ಇರಲು ಅಗತ್ಯವಾದ ಹಣ, ಅನುಕೂಲ. ಅಥವಾ ಪರ್ಯಾಯ ವ್ಯವಸ್ಥೆ ಏನೂ ಇಲ್ಲದೆ ಈ ಪ್ರತಿಷ್ಠಿತ ಪಟ್ಟಣದಲ್ಲಿ ಅಲೆದಾಡುತ್ತಿದ್ದ ವಿದ್ಯಾರ್ಥಿಯ ತಲೆ ತುಂಬಾ ಕನಸುಗಳಿದ್ದವೆ ವಿನಃ ಜೇಬಿನ ತುಂಬ ಹಣವಿರಲಿಲ್ಲ. ಪ್ರಾರಂಭದಲ್ಲಿ ಒಂದೆರಡು ತಿಂಗಳು ಸ್ನೇಹಿತರ ಜೊತೆಯಲ್ಲಿ ಹೇಗೋ ಕಾಲ ಕಳೆದದ್ದಾಯಿತು. ಒಂದೆರಡು ತಿಂಗಳಾದ ಮೇಲೆ ಸುತ್ತೂರು ಹಾಸ್ಟೆಲ್ ನಲ್ಲಿ ಶ್ರೀನಿವಾಸರವರಿಗೆ ಪ್ರವೇಶ ದೊರಕಿತು. ಆದರೆ ಅದು ಮಹಾರಾಜ ಕಾಲೇಜಿನಿಂದ 3 ಮೈಲಿ ದೂರದ ಬನ್ನಿಮಂಟಪದಲ್ಲಿದ್ದಿತು. ಅಲ್ಲಿಂದ ನಡೆದುಕೊಂಡು ಬರುವುದು ಸಾಕಷ್ಟು ಪ್ರಯಾಸವೇ ಆಗಿರುತ್ತಿತ್ತು. ಆಗ ಯಾವ ಬಸ್ಸು ಸೌಕರ್ಯಗಳು ಇರಲಿಲ್ಲ. ಇನ್ನೂ ಹಾಸ್ಟೆಲ್‌ನಲ್ಲಿಯೂ ಅನೇಕ ಮೂಲಭೂತ ಸೌಕರ್ಯಗಳ ಕೊರತೆ ಇದ್ದಿತು. ಉಚಿತ ವಿದ್ಯಾರ್ಥಿ ನಿಲಯವಾಗಿದ್ದುದರಿಂದ ಸಂಸ್ಥೆಯವರು ವಿದ್ಯಾರ್ಥಿಗಳಿಗೆ ಅನೇಕ ಅನುಕೂಲಗಳನ್ನು ಕಲ್ಪಿಸಲಾಗಿರಲಿಲ್ಲ. ಇಷ್ಟೆಲ್ಲಾ ಕೊರತೆಗಳು ಮಹಾರಾಜ ಕಾಲೇಜಿನ ವಿದ್ಯಾರ್ಥಿಯಾಗಿ ಅಲ್ಲಿ ಅಭ್ಯಾಸ

ಮಾಡಲಾರಂಭಿಸಿದಾಗ ಎಲ್ಲೋ ಮಿಂಚಿ ಮಾಯವಾದವು. ತರಗತಿಯಲ್ಲಿ ಪ್ರಾಧ್ಯಾಪಕರ ಬೋಧನೆ ಹಿರಿಯ ವಿದ್ಯಾರ್ಥಿಗಳ ಪ್ರೋತ್ಸಾಹ ಎಲ್ಲಕ್ಕೂ ಮಿಗಿಲಾಗಿ ಸುಸಜ್ಜಿತವಾದ ಗ್ರಂಥಾಲಯ ಇವೆಲ್ಲವು ಶ್ರೀನಿವಾಸರವರ ಬಾಳಿಗೆ ಒಂದು ಹೊಸ ಆಯಾಮವನ್ನೇ ಕಲ್ಪಿಸಿಕೊಟ್ಟಿತು.

ಮೈಸೂರು ವಿಶ್ವವಿದ್ಯಾನಿಲಯದ ಕೇಂದ್ರವಾಗಿದ್ದ ಮಹಾರಾಜ ಕಾಲೇಜು ಅಂದು ದೇಶದ ಪ್ರಸಿದ್ಧ ವಿದ್ವಾಂಸರನ್ನು ನುರಿತ ಪ್ರಾಧ್ಯಾಪಕರನ್ನು ಹೊಂದಿದ್ದು, ದೇಶದ ಪ್ರಸಿದ್ದ ಖ್ಯಾತ ಶೈಕ್ಷಣಿಕ ಸಂಸ್ಥೆಯಾಗಿದ್ದಿತು. ಕಾಲೇಜಿನ ಪ್ರತಿಯೊಂದು ವಿಭಾಗದಲ್ಲೂ ಅನೇಕ ಶ್ರೇಷ್ಠ. ವಿಷಯ ತಜ್ಞರು ಸಂಶೋಧಕರು ಬೋಧನೆ, ಸಂಶೋಧನೆಯಲ್ಲಿ ಅದೊಂದು ಪವಿತ್ರ ಜ್ಞಾನ ದೇಗುಲವಾಗಿ ಕಂಡಿತು. ಬಹುಬೇಗ ಶ್ರೀನಿವಾಸರವರು ತಮ್ಮ ಬಹು ಕಾಲದ ಮನದಾಸೆಯನ್ನು ಪೂರೈಸಿಕೊಳ್ಳಲು ಅವಕಾಶ ದೊರಕಿದ್ದಿತು. ಕಾಲೇಜಿನ ಗ್ರಂಥ ಭಂಡಾರದಲ್ಲಿದ್ದ ಪುಸ್ತಕಗಳು ಅಧ್ಯಯನದ ಮೇಲೆಯೇ ಅವರು ಹೆಚ್ಚು ಭರವಸೆಯನ್ನು ಇಟ್ಟುಕೊಳ್ಳಬೇಕಾಯಿತು. ವಿವಿಧ ಗ್ರಂಥಾಲಯಗಳ ಪುಸ್ತಕಗಳು ಅವರ ಜ್ಞಾನ ತೃಷೆಯನ್ನು ನೀಗಿಸುತ್ತಾ ಹೋದಂತೆ ಬೌದ್ಧಿಕ ಜಗತ್ತಿನ ಧೀರ್ಘವಾದ ಹಾದಿಯಲ್ಲಿ ಒಂದೊಂದೆ ಹೆಜ್ಜೆ ಇಡುತ್ತಾ ಮುಂದೆ ಮುಂದೆ ಸಾಗಿದರು.

ಚರಿತ್ರೆ ಆನರ್ಸ್ ತರಗತಿಯಲ್ಲಿ ಸುಮಾರು 15 ವಿದ್ಯಾರ್ಥಿಗಳಿದ್ದರು. ಅವರೆಲ್ಲರು ಇತಿಹಾಸದಲ್ಲಿ ಅತ್ಯಂತ ಹೆಚ್ಚು ಅಂಕಗಳನ್ನು ಗಳಿಸಿದ್ದರಿಂದ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶವನ್ನು ಪಡೆದಿದ್ದರು. ಶ್ರೀನಿವಾಸರವರು ಇತಿಹಾಸದಲ್ಲಿ ಅವರೆಲ್ಲರಿಗಿಂತಲೂ ಹೆಚ್ಚು ಅಂಕಗಳನ್ನು ಪಡೆಯದಿದ್ದರೂ ಇತಿಹಾಸದಲ್ಲಿ ಹೆಚ್ಚು ಅಂಕಗಳಿಸಿ ಅವರು ಕನಾಟಕದಲ್ಲಿಯೇ 6ನೇ ರ್‍ಯಾಂಕನ್ನು ಪಡೆದಿದ್ದರಿಂದ ಈ ಪ್ರತಿಷ್ಠಿತ ವಿಶ್ವವಿದ್ಯಾನಿಲಯದಲ್ಲಿ ಪ್ರವೇಶ ಪಡೆಯಲು ಸಾಧ್ಯವಾಗಿದ್ದಿತು. ಆದರೆ ಅವರ ಉತ್ಕಟ ಜ್ಞಾನದಾಹ ಅತ್ಯಂತ ಆಸಕ್ತಿಯಿಂದ ಪ್ರಾಧ್ಯಾಪಕರು ಬೋಧನೆಯ ಸ್ವೀಕಾರ, ಎಲ್ಲಕ್ಕೂ ಮಿಗಿಲಾಗಿ ಸ್ವತಃ ಶ್ರೇಷ್ಠ ಇತಿಹಾಸ ಗ್ರಂಥಗಳ ಅಧ್ಯಯನದಿಂದ ದೊರೆತ ವಿಶೇಷ ಸಾಮರ್ಥ್ಯ ಅವರನ್ನು ಒಬ್ಬ ಉತ್ತಮ ವಿದ್ಯಾರ್ಥಿಯೆಂದು ಗುರ್ತಿಸಿಕೊಳ್ಳಲು ಸಹಾಯಕವಾಗಿದ್ದಿತು. ಮೊದಲನೆಯ ವಾರ್ಷಿಕ ಪರೀಕ್ಷೆಯಲ್ಲಿ ಅವರು ನಿರೀಕ್ಷೆಯಂತೆ ಪ್ರಥಮ ರ್‍ಯಾಂಕ್ ಪಡೆದರು. ಇದರಿಂದ ಅವರಿಗೆ ಸಬ್ಜೆಕ್ಟ್ ವಿದ್ಯಾರ್ಥಿ ವೇತನ ದೊರೆತು ತಮ್ಮ ವಿದ್ಯಾಭ್ಯಾಸದ ವೆಚ್ಚಕ್ಕೆಸ ಸ್ವಲ್ಪ ಸಹಾಯಕವಾಯಿತು.

ಎಂ.ವಿ. ಶ್ರೀನಿವಾಸರವರು ಇತಿಹಾಸವನ್ನು ಅಭ್ಯಾಸ ಮಾಡಬೇಕೆಂಬ ಗುರಿಯನ್ನು ಹೊಂದಿದವರಲ್ಲಿ ವಿಧಿ ಅವರನ್ನು ಎಲ್ಲಿಂದಲೂ ಕರೆದುಕೊಂಡು ಬಂದು ಯಾವುದೋ ಒಂದು ಮಾರ್ಗದಲ್ಲಿ ನಡೆಯುವಂತೆ ಮಾಡಿದೆ. ಆದರೆ ಈ ಅವಕಾಶವನ್ನು ಅವರು ಸದುಪಯೋಗವನ್ನು ಪಡೆದುಕೊಂಡು ಅಧ್ಯಯನವನ್ನು ಮುಂದುವರಿಸಿದರು ಆದರೆ ದೂರದ ಊರಿನಲ್ಲಿ ವಿಶ್ವವಿದ್ಯಾನಿಲಯದ ಕೇಂದ್ರದಲ್ಲಿ ಉನ್ನತ ವ್ಯಾಸಂಗ ಮಾಡಬೇಕಾದರೆ ಶ್ರದ್ದೆಯೊಂದು ಇದ್ದರೆ ಸಾಲದು ಮೂಲಭೂತ ಸೌಕರ್ಯಗಳು ಇಲ್ಲದೆ ಯಾವುದೇ ಕಾರ್ಯವನ್ನು ಮಾಡಲಾಗುವುದಿಲ್ಲ, ಇತಿಹಾಸದ ಆನರ್ಸ್ ಸೇರಿಕೊಳ್ಳಲು ಸಂಭ್ರಮದಿಂದ ಉತ್ಸಾಹದಿಂದ. ಮೈಸೂರಿಗೆ ಬಂದರು. ಆದರೆ ಕುಟುಂಬದಿಂದ ಅಗತ್ಯವಾದ ಹಣಕಾಸಿನ ನೆರವು ಸಿಗುತ್ತಿರಲಿಲ್ಲ. ಹಾಸ್ಟೆಲ್ ನಲ್ಲಿ ಸೇರಿಕೊಂಡಿದ್ದರು, ಅದು ಕೆಲವು ತಿಂಗಳು ಮುಚ್ಚಿದಾಗ ಹೊರಗಡೆ ಊಟಮಾಡಿಕೊಂಡಿರಬೇಕಾಗಿದ್ದಿತು. ಬಹಳಷ್ಟು ಕಷ್ಟಕಾರ್ಪಾಣ್ಯಗಳ ನಡುವೆ ಅವರ ಜೀವನ

ಮುಂದುವರಿಯಿತು. ಹಣಕಾಸಿನ ತೊಂದರೆ ಅವರ ಅಧ್ಯಯನಕ್ಕೆ ಹೆಚ್ಚು ಆಡಚಣೆ ಆಗದಂತೆ ಅವರು ತಮ್ಮ ಅಧ್ಯಯನ ಧೀಕ್ಷೆಯನ್ನು ಮಾಡಿದರು. ಇತಿಹಾಸದ ಜೊತೆಗೆ ಅವರು ಇಂಗ್ಲೀಷ್ ಮತ್ತು ಸಂಸ್ಕೃತವನ್ನು ಅಭ್ಯಾಸ ಮಾಡಬೇಕಾಗಿತ್ತು. ಅದಕ್ಕಾಗಿ ಅವರು ಇಂಗ್ಲೀಷ್ ಸಾಹಿತ್ಯ ವಿಮರ್ಶೆಗ್ರಂಥಗಳನ್ನು ಓದಲು ಅವರ ಹಿರಿಯರು ಗದರಿಸಿ ಚರಿತ್ರೆಯನ್ನು ಮಾತ್ರ ಓದಿದರೆ ಸಾಕು ಎಂದೂ ಬುದ್ಧಿ ಹೇಳಿದರು. ಆದರೆ ಅದು ಎಂವಿ. ಶ್ರೀನಿವಾಸರ ಮೇಲೆ ಯಾವ ಪರಿಣಾಮವನ್ನು ಉಂಟುಮಾಡಲಿಲ್ಲ. ಚರಿತ್ರೆಯನ್ನು ಆಳವಾಗಿ ಅಭ್ಯಾಸ ಮಾಡುತ್ತಿದ್ದಂತೆಯೇ ಸಾಹಿತ್ಯ, ಮನೋವಿಜ್ಞಾನ ರಾಜಕೀಯ ಶಾಸ್ತ್ರ ಮುಂತಾದ ವಿಷಯಗಳನ್ನು ಅವರು ಆಸಕ್ತಿಯನ್ನು ಬೆಳೆಸಿಕೊಂಡು ಅದರಲ್ಲಿ ವ್ಯಾಪಕವಾದ ಅಧ್ಯಯನವನ್ನು ಮಾಡುತ್ತಾ ಹೋದರು. ಈ ಅವಧಿಯಲ್ಲಿಯೇ ಅವರು ಫ್ರೆಂಚ್, ಮತ್ತು ಪರ್ಷಿಯನ್ ಭಾಷೆಗಳನ್ನು ಕಲಿಯಲು ಪ್ರಾರಂಭಿಸಿದರು. ಪ್ರೆಂಚ್‌ನಲ್ಲಿ ಡಿಪ್ಲೊಮಾ ದೊರಕಿತು. ಪರ್ಷಿಯನ್ ಓದುವಷ್ಟು ಕಲಿತಿದ್ದರು. ಈ ಹಂತದಲ್ಲಿ ಭಾಷೆಗಳಲ್ಲಿ ಪರಿಣಿತ ಪಡೆದಿದ್ದರು. ಓದಲು, ಮಾತಾಡಲು ಬರುತ್ತಿತ್ತು. ಆದರೆ ನನಗೆ ಇನ್ನೂ ಕಲಿಯಬೇಕಾದದ್ದು ಬಹಳಷ್ಟು ಇದೆ ಎಂಬ ಧ್ಯೆಯ, ಮಾತ್ರ ಒಂದನ್ನು ಮಾತ್ರ ಗುರಿಯಾಗಿಟ್ಟುಕೊಂಡು ಮುಂದುವರಿದರು. ನನಗೆ 11 ಭಾಷೆಗಳು ಬರಬಹುದು ಆದರೆ ತಮ್ಮ ಪ್ರಾಧ್ಯಾಪಕರಾದ ಡಾ: ಶ್ರೀಕಂಠಶಾಸ್ತ್ರಿಗಳವರೆಗೆ 30 ಭಾಷೆಗಳು ಬರುತ್ತವಂತೆ ಅಂತಹ ಅನೇಕ ಶ್ರೀಕಂಠಶಾಸ್ತ್ರೀಗಳು ಮಹಾರಾಜ ಕಾಲೇಜಿನ ಮೊಗಶಾಲೆಯಲ್ಲಿ ಓಡಾಡುತ್ತಿದ್ದರು. ವಿದ್ಯಾರ್ಥಿಗಳನ್ನು ತಮ್ಮ ಬೋಧನೆಯಿಂದ ವಿದ್ವಾಂಸರನ್ನಾಗಿ ಮಾಡಲು ಪ್ರಯತ್ತಿಸುತ್ತಿದ್ದರು. ಆ ಜ್ಞಾನ ಯಜ್ಞ ಶಾಲೆಯಲ್ಲಿ ದಿನವು ಮುಂದು ಶುಚಿತ್ ಭೂತರಾಗಿ ಮತ್ತೆ ತಮ್ಮ ಓದಿನ ಕಾಯಕದಲ್ಲಿ ತೊಡಗಿಕೊಳ್ಳತ್ತಿದ್ದರು. ಅವರಿಗೆ ಗೊತ್ತಿತ್ತು ತಾನು ಕ್ರಮಿಸಬೇಕಾದ ದಾರಿ ಬಹಳ ಧೀರ್ಘವಾದದ್ದು ಇನ್ನೂ ಬಹಳ ದೂರ ಎಂದು ಎರಡು ವರ್ಷಗಳ ಕಾಲ ಅವರು ಉಚಿತ ವಿದ್ಯಾರ್ಥಿನಿಲಯದಲ್ಲಿ ಇದ್ದುಕೊಂಡೆ ಅವರ ಓದನ್ನು ಮುಂದುವರಿಸಿದರು. ಮಹಾರಾಜ ಕಾಲೇಜಿಗೆ ಒಳ್ಳೆಯ ಹಾಸ್ಟೆಲ್ ಇದ್ದರೂ ಕೂಡ ಬೇಕಾದ ದುಭಾರಿ ಹಣ ಅವರಲ್ಲಿ ಇರಲಿಲ್ಲ. ಅನೇಕ ಶ್ರೀಮಂತರ ಮಕ್ಕಳು ಈ ವಿದ್ಯಾರ್ಥಿ ನಿಲಯದಲ್ಲಿದ್ದು ಸಕಲ ಸೌಲಭ್ಯಗಳನ್ನು ಅನುಭವಿಸುತ್ತಾ ತಮ್ಮ ವಿದ್ಯಾರ್ಥಿ ಜೀವನವನ್ನು ಸವಿಯುತ್ತಿದ್ದರು. ಆದರೆ ಎಂ.ವಿ. ಶ್ರೀನಿವಾಸ್‌ರವರಿಗಿದ್ದ ಅಭಿರುಚಿಯೇ ಬೇರೆ ಅವರ ಗುರಿಯೊ ಭಿನ್ನವಾಗಿದ್ದಿತು. ಮಹಾರಾಜ ಕಾಲೇಜಿನಲ್ಲಿ ಆನರ್ಸ್ ಮತ್ತು ಎಂ.ಎ ತರಗತಿಗಳಲ್ಲಿ ಅವರು ಸತತವಾಗಿ ಮೊದಲನೆ ರ‍್ಯಾಂಕ್‌ನ್ನು ಪಡೆದು ತಮ್ಮ ಗುರುಗಳ ಹಾಗೂ ಸಹಪಾಠಿಗಳ ಮೆಚ್ಚುಗೆ ಗಳಿಸಿದರು. ಇಷ್ಟೆಲ್ಲಾ ಅಧ್ಯಯನ ಅಭ್ಯಾಸಗಳ ನಡುವೆ ಪಠ್ಯೇತರ ಚಟುವಟಿಕೆಗಳ ಬಗ್ಗೆಯು ಅವರು ಆಸಕ್ತಿಯನ್ನು ಹೊಂದಿದ್ದರು. ಚರ್ಚಾಗೋಷ್ಠಿ, ಸ್ಪರ್ಧೆ, ಸಾಹಿತ್ಯ ಕೂಟ, ಸಮಾಜ ಸೇವಾ ಸಂಘ, ರಾಮಕೃಷ್ಣ ಆಶ್ರಮ ಮುಂತಾದವುಗಳಲ್ಲಿ ಆಸಕ್ತಿಯಿಂದ ಭಾಗವಹಿಸುತ್ತಾ ಹೋದರು. ಇವುಗಳಲ್ಲಿ ಪ್ರೊ.ಯಮುನಾಚಾರ್ ಅವರ ನೇತೃತ್ವದ ಸಮಾಜ ಸೇವೆ, ಸಂಘದಲ್ಲಿ ಸತತವಾಗಿ ಭಾಗವಹಿಸುತ್ತಾ ಬಂದರು ಅದರ ಆಗಮವಾಗಿ ಅನೇಕ ಸೇವಾಕಾರ್ಯಗಳಲ್ಲಿ ಅವರು ಪಾಲ್ಗೊಳ್ಳಬೇಕಾಯಿತು. ಈ ಕಾರ್ಯದಲ್ಲಿದ್ದಾಗ ಕುಕ್ಕರಹಳ್ಳಿಯ ಒಂದು ಕೊಳಕು ಬೀದಿಯ ಚರಂಡಿಯನ್ನು ಸ್ವಚ್ಚಗೊಳಿಸಿದ ಕಥೆ ನಿಜಕ್ಕೂ ಸ್ವಾರಸ್ಯಕರವಾದದು. ಅದಕ್ಕೂ ಮಿಗಿಲಾಗಿ ಅವರು ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡಿದ್ದು ಅವರಿಗೆ ಅತ್ಯಂತ ಹೆಚ್ಚು ತೃಪ್ತಿಯನ್ನು ನೀಡಿದ ವಿಷಯವಾಗಿದೆ. ಕನ್ನಡ ಸಾಹಿತ್ಯದ ದಿಗ್ಗಜರೆನಿಸಿದ್ದ ತ.ರಾ.ಸು, ಗೋಪಾಲಕೃಷ್ಣ ಅಡಿಗ, ಆನಂದ, ತ್ರಿವೇಣಿ ಚದುರಂಗ ಮೊದಲಾದ ಖ್ಯಾತ ನಾಮರು ಪ್ರತಿ ತಿಂಗಳು ನಗರದ ಪ್ರತಿಷ್ಠಿತ ದಾಸ್

ಪ್ರಕಾಶನಲ್ಲಿ ಸಭೆಸೇರಿ ಚರ್ಚೆ ಭಾಷಣ ವಿಚಾರ ವಿನಿಮಯ ಮೊದಲಾದ ಕಾರ್ಯಕ್ರಮುಗಳನ್ನು ಹಮ್ಮಿಕೊಳ್ಳುತ್ತಿದ್ದರು. ಅದರಲ್ಲಿ ಹಲವಾರು ವರ್ಷ ಸಕ್ರಿಯವಾಗಿ ಭಾಗವಹಿಸಿ ಸಾಹಿತ್ಯರಸವನ್ನು ಸವಿದ ಅನುಭವ ಅವರಿಗೆ ಇಂದಿಗೂ ರೋಮಾಂಚನವನ್ನು ಉಂಟುಮಾಡುತ್ತದೆ. ಹೀಗೆ ಸದಾ ಅಧ್ಯಯನ, ಜ್ಞಾನಾರ್ಜನೆ ವಿಚಾರ ವಿನಿಮಯಗಳಲ್ಲಿ ಹಿರಿಯ ಕಿರಿಯ ಮಿತ್ರರ ಸಂಗಮದ ಸುಂದರ ಅನುಭವಗಳಲ್ಲಿ 3 ವರ್ಷದ ಇತಿಹಾಸದ ಆನರ್ಸ್ ಪದವಿಯ ಕಾಲ ಮುಕ್ತಾಯವಾಗಿದ್ದಿತು. ಇತಿಹಾಸ ವಿಭಾಗದಲ್ಲಿ ಶ್ರೀನಿವಾಸ ನಿರೀಕ್ಷಿಸಿದಂತೆ ಅಧ್ಯಾಪಕರೆಲ್ಲ ಶ್ರೇಷ್ಠ ವಿದ್ವಾಂಸರಾಗಿರಲಿಲ್ಲ. ಅಷ್ಟು ಸಾಲದೆಂಬಂತೆ ಅವರು ಉತ್ತಮ ಬೋಧಕರು, ಮಾರ್ಗದಶಕರು ಸಹನೆ, ಸಹಾನುಭೂತಿ ಸಹೃದಯವುಳ್ಳ ವಿದ್ಯಾದಾನಿಗಳು ಆಗಿರಲಿಲ್ಲ. ವಿಶ್ವವಿದ್ಯಾನಿಲಯದ ಅನೇಕ ಅಧ್ಯಾಪಕರು ತಮ್ಮದೇ ಆದ ಇತಿಹಾಸಗಳನ್ನು ಹೊಂದಿದ್ದರು. ಸಂಕುಚಿತ ಮನೋಭಾವ, ಸ್ವಾರ್ಥ ಪಕ್ಷಪಾತ ಉನ್ನತ ಆದರ್ಶಗಳ ಅಭಾವ ಇಂತಹ ಅನೇಕ ದೋಷಗಳನ್ನು ಅವರಲ್ಲಿಯೂ ಕಾಣಬಹುದಾಗಿದ್ದಿತು. ಅಂತಹ ಎಲ್ಲಾ ಕೊರತೆಗಲನ್ನು ನೀಗಿಸಲು ಮೈಸೂರಿನಲ್ಲಿದ್ದ ಗ್ರಂಥಾಲಯಗಳು ಸದಾ ಪುಸ್ತಕಗಳ ನಡುವೆಯ ಮುಳುಗಿರುವ ಅಲ್ಪ ಅವಧಿಯಲ್ಲಿ ಎಷ್ಟು ಸಾದ್ಯವೋ ಅಷ್ಟು ಜ್ಞಾನವನ್ನು ಪಡೆದುಕೊಳ್ಳುವ ತವಕ ಆದರೆ ಅದು ಅಂಕಗಳನ್ನು ಗಳಿಸುವ ಇತರರನ್ನು ತೃಪ್ತಿಪಡಿಸುವ ಅಥವ ಅವರ ಪ್ರಶಂಸೆಯನ್ನು ಪಡೆಯುವುದಕ್ಕಾಗಿ ಮಾಡಿದ ಪ್ರಯತ್ನವಲ್ಲ. ಅದೊಂದು ಶುದ್ದ ಜ್ಞಾನಯಜ್ಞ ತಾನು ಕಲಿಯಬೇಕಾಗಿದೆ. ಈಗ ಕಲಿತಿರುವುದು ಸಾಲದು. ಶ್ರಮಿಸಬೇಕಾದ ಹಾದಿ ಇನ್ನೂ ಬಹಳ ಇದೆ. ಶ್ರದ್ದೆ, ತಾಳ್ಮೆ ದೂರದೃಷ್ಠಿ ಇವುಗಳು ಅವರಲ್ಲಿ ಎದ್ದು ಕಾಣುತ್ತಿದ್ದವು. ಪ್ರಮುಖ ಲಕ್ಷಣಗಳು ಅವರ ವ್ಯಕ್ತಿತ್ವವನ್ನು ರೂಪಿಸುವ ಶಕ್ತಿಗಳು ಆಗಿದ್ದವು 1956 ರಲ್ಲಿ ಶ್ರೀನಿವಾಸರವರು ಬಿ.ಎ ಆನರ್ಸ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್‌ನಲ್ಲಿ ಉತ್ತೀರ್ಣರಾಗಿರಲಿಲ್ಲ. ಆದರೂ ಅವರು ಪ್ರಥಮ ದರ್ಜೆಗೆ ಕೆಲವೇ ಕೆಲವು ಅಂಗಳಿಂದ ಪ್ರಥಮ ದರ್ಜೆಯನ್ನು ಪಡೆಯಲು ಸಾಧ್ಯವಾಗಿರಲಿಲ್ಲ. ಆದರೂ ಬಿ.ಎ. ಆನರ್ಸ್‌ನಲ್ಲಿ ಇತಿಹಾಸದಲ್ಲಿ ಪ್ರಥಮ ಅವರಿಗೆ 3 ಪ್ರತಿಷ್ಠಿತ ಚಿನ್ನದ ಪದಕಗಳು ಲಭಿಸಿದ್ದವು.

ಆನಂದರಾವ್ ಚಿನ್ನದ ಪದಕ, ಕ್ಯಾಂಡೀ ಚಿನ್ನದ ಪದಕ, ಕಾಂತರಾಜ ಅರಸ ಚಿನ್ನದ ಪದಕ ಇದು ದೂರದ ಹಳ್ಳಿಯೊಂದರಲ್ಲಿ ಬಂದು ಅನೇಕ ಅನಾನುಕೂಲಗಳ ನಡುವೆ ಅವರು ನಡೆಸಿದ ಮಹಾನ್ ಸಾಧನೆಯಾಗಿದೆ. ತಮ್ಮ ಸಾಧನೆಯನ್ನು ಪ್ರಚಾರ ಮಾಡುವ ಕಾರ್ಯಕ್ಕೆ ಎಂದೂ ಕೈಹಾಕಲಿಲ್ಲ. ದೂರದ ಹಿರೇಹಳ್ಳಿಯಲ್ಲಿದ್ದ ಅವರ ತಂದೆ ತಾಯಿಗಳು ಮಗನ ಸಾಧನೆಯನ್ನು ಮೆಚ್ಚಿ ಪ್ರಶಂಸಿಸುವಷ್ಟು ಪ್ರೌಢರಾಗಿರಲಿಲ್ಲ. ಪ್ರಾಯಶಃ ಇಂತಹ ಹೊಗಳಿಕೆ ಅಗ್ಗದ ಪ್ರಚಾರ ಇವುಗಳಿಂದ ದೂರ ಇದ್ದುದು ಅವರ ಮುಂದಿನ ಹಾದಿಗೆ ಸುಗಮವಾಗಿತ್ತೇನೊ. ಶ್ರೀನಿವಾಸರವರು ಸಂಕೋಚ ಸ್ವಭಾವದವರಾಗಿ ಆತ್ಮ ವಿಶ್ವಾಸವುಳ್ಳವರಾಗಿದ್ದು ತಮ್ಮ ಅಧ್ಯಯನ ಅವರ ಸಾಧನೆ, ಸದ್ಗುಣಗಳು ಅನೇಕ ಸಹಪಾಠಿಗಳ ಪ್ರಾಧ್ಯಾಪಕರ ಗಮನವನ್ನು ಸೆಳೆದಿದ್ದವು. ಅವರ ಬೌದ್ಧಿಕ ಚಟುವಟಿಕೆಗಳಿಂದ ಅಂದಿನ ವಿದ್ಯಾರ್ಥಿ ವೃಂದದಲ್ಲಿ ಗೌರವಕ್ಕೆ ಪಾತ್ರರಾಗಿದ್ದರು. ಮೂರು ಚಿನ್ನದ ಪದಕಗಳನ್ನು ಮಹಾರಾಜರ ಕೈಯಿಂದ ಪಡೆದ ಅನುಭವ ಜೀವನದಲ್ಲಿ ಅವೀಸ್ಮರಣೀಯವಾದುದು. ಇತರ ವಿಷಯಗಳ (ಅರ್ಥಶಾಸ್ತ್ರ, ರಾಜ್ಯಶಾಸ್ತ್ರ) ವಿಷಯಗಳಲ್ಲಿಯೂ ಹೆಚ್ಚು ಅಂಕಗಳಿದ್ದು ಒಂದು ಚಿನ್ನದ ಪದಕ ಲಭಿಸಿತು. ಹೀಗಾಗಿ ಕಾಲೇಜಿನ ಅನೇಕ ಪ್ರಾಧ್ಯಾಪಕರು, ಹಿರಿಯ ವಿದ್ಯಾರ್ಥಿಗಳು ಇವರ ಬಗ್ಗೆ ಒಳ್ಳೆಯ ಅಭಿಪ್ರಾಯವನ್ನು ಹೊಂದಿದ್ದರು.

3 ವರ್ಷಗಳ ಆನರ್ಸ್, ಅಭ್ಯಾಸವಾದ ಮೇಲೆ ಎಂ.ಎ ಪದವಿಗಾಗಿ ಮತ್ತೊಂದು ವರ್ಷ ಅಭ್ಯಾಸವನ್ನು ಮುಂದುವರಿಸಿದರು. ಎಲ್ಲಿಯು ತರಗತಿಯ ಬೋಧನೆ, ಸಹಾಯ, ಮಾರ್ಗದರ್ಶನ ದೊರೆಯಲಿಲ್ಲ. ಆದರೂ ಗ್ರಂಥಗಳ ಮೇಲೆ ಅವಲಂಭಿಸಿದ್ದರಿಂದ ಅವರ ಅಧ್ಯಯನ ಹೆಚ್ಚು ಶ್ರಮವಿರದೆ ಮುಂದೆ ಸಾಗಿತು. ಎಂ.ಎ ತರಗತಿಯಲ್ಲಿ ಓದುವಾಗ ಸಂಶೋಧನೆಗೆ ಅಗತ್ಯವಾದ ಸಾಕಷ್ಟು ವಿಷಯಗಳನ್ನು ಅವರು ಸಂಗ್ರಹಿಸ ಬೇಕಾಗಿದ್ದಿತು. ಆದುದರಿಂದ ಕೆಲಸದ ಹೊರೆ ಸಾಕಷ್ಟು ದೊಡ್ಡದಾಗಿಯೆ ಇದ್ದಿತು. ಎಂ.ಎ ತರಗತಿಯಲ್ಲಿ ಅವರು ಮೊದಲ ರ್‍ಯಾಂಕ್‌ನ್ನು ಪಡೆದರು. ಪ್ರತಿಷ್ಠಿತ ಮಹಾರಾಜರ ಚಿನ್ನದ ಪದಕವನ್ನು ಗಳಿಸಿಕೊಂಡರು. ಹೀಗೆ ತಮ್ಮ 4 ವರ್ಷಗಳ ಅಧ್ಯಯನದಲ್ಲಿ ಶ್ರೇಷ್ಠ ಮಟ್ಟದಲ್ಲಿ ಆಭ್ಯಾಸವನ್ನು ಮುಗಿಸಿ ಸಾಕಷ್ಟು ಒಳ್ಳೆಯ ಹೆಸರನ್ನು ಗಳಿಸಿ ವಿದ್ಯಾಭ್ಯಾಸ ಮುಗಿಸಿ ಹೊರಜಗತ್ತಿಗೆ ಕಾಲಿಟ್ಟರು. ತಮ್ಮ ಆಭ್ಯಾಸದ ವಿಷಯದಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದ್ದುದರಿಂದ ಅವರಿಗೆ ಸುಲಭವಾಗಿ ಕಾಲೇಜಿನಲ್ಲಿ ಕೆಲಸ ಲಭಿಸಿತು. ಎಂ.ಎ ಪದವಿ ಪಡೆದ ನಂತರ ವಿದ್ಯಾರ್ಥಿ ತಾನೂ ಎಲ್ಲವನ್ನೂ ತಿಳಿದವನು ಎಂದೂ ಭಾವಿಸಿದರೆ ಅದು ಅವನ ಪ್ರಗತಿಗೆ ಕುತ್ತಾಗುತ್ತದೆ. ಅದು ಶಿಕ್ಷಣದ ಒಂದು ಹಂತ ಎಂ.ಎ ಓದಿದ ನಂತರ ಅಧ್ಯಯನ ಮಾಡುವ ಆಸಕ್ತಿ ಇರುತ್ತದೆ.

ಎಂ.ಎ ಪರೀಕ್ಷೆ ಮುಗಿದ ನಂತರ ಅವರು ಸ್ವಲ್ಪ ದಿನ ತಮ್ಮ ಹಳ್ಳಿಗೆ ಹೋಗಿದ್ದರು. ಈತನನ್ನು ಕಂಡು ಅಲ್ಲಿಯವರು ನಿವೇಕೆ ಇನ್ನೂ ಓದುತ್ತಿದ್ದೀರಿ ಎಂದೂ ಕೇಳಿದರು. ಪ್ರಾಯಶ: ಪರೀಕ್ಷೆಯಲ್ಲಿ ಫೇಲಾಗಿರಬೇಕೆಂದು ಅವರು ತಿಳಿದುಕೊಂಡಿದ್ದರು.

ಅಧ್ಯಾಪಕ ವೃತ್ತಿ ಕೈಗೊಳ್ಳುವ ಮುನ್ನ ಕೆಲವು ತಿಂಗಳು ಬಿಡುವು ಸಿಕ್ಕಿದಾಗ ಅದನ್ನು ಶ್ರೀನಿವಾಸರವರು ಸರಿಯಾದ ರೀತಿಯಲ್ಲಿ ಬಳಸಿಕೊಂಡರು. ಅವರು ತಮ್ಮ ಎಂ.ಎ ತರಗತಿಯಲ್ಲಿ ಓದುತ್ತಿದ್ದ ಕೆಲವು ವಿಷಯಗಳ ಬಗ್ಗೆ ಇನ್ನೂ ಹೆಚ್ಚು ಆಳವಾದ ಸಂಶೋಧನೆ ನಡೆಸಲು ಪ್ರಾರಂಭಿಸಿದರು. ಇವುಗಳಲ್ಲಿ ಸ್ವಾತಂತ್ರ ಸಂಗ್ರಾಮದ ಬಗ್ಗೆ ಸಾಕಷ್ಟು ಅಧ್ಯಾಯನ ಮಾಡಲು ಅವಕಾಶ ವಿದ್ದಿತು. ಅದನ್ನು ಬರೆಯಲು ಸಾಧ್ಯವಾಯಿತು. ಹಾಗೇಯೇ ಅಮೇರಿಕಾದ ಇತಿಹಾಸವು ಅವರ ಗಮನವನನ್ನು ಸೆಳೆದಿದ್ದಿತು. ಆ ಕ್ಷೇತ್ರದಲ್ಲಿಯೂ ಇವರು ಹೆಚ್ಚು ಅಧ್ಯಯನಕ್ಕೆ ಗಮನ ನೀಡಿದರು. ಎಲ್ಲಕ್ಕೂ ಮಿಗಿಲಾಗಿ ಮರಾಠರ (ಪೇಶ್ವೆಗಳ) ಇತಿಹಾಸದಲ್ಲಿ ಸಂಶೋಧನೆ ಮಾಡಲು ನಿರ್ಧರಿಸಿ ಮಹಾರಾಷ್ಟ್ರದಲ್ಲಿ ಹಲವಾರು ತಿಂಗಳು ವ್ಯಾಪಕವಾದ ಗ್ರಂಥಗಳ ಸಮೀಕ್ಷೆಯನ್ನು ಕೈಗೊಂಡರು.

**ಬಿ) ವೃತ್ತಿ ಜೀವನ ಮತ್ತು ಬೋಧಕರಾಗಿ:-**

ಭಾರತಕ್ಕೆ ಹಿಂದಿರುಗಿದ ಮೇಲೆ ಶ್ರೀನಿವಾಸರವರು ಬೆಂಗಳೂರಿನ ಆರ್ಟ್ಸ್ ಕಾಲೇಜಿನಲ್ಲಿ ಬೋಧನೆ ಪ್ರಾರಂಭಿಸಿದರು. ಅವರಿಗೆ ಪಿ.ಹೆಚ್.ಡಿ ಲಭಿಸಿದ್ದು ಪುಸ್ತಕ ಪ್ರಕಟಣೆ ಮೊದಲಾದ ಅಂಶಗಳ ಆಧಾರದ ಮೇಲೆ 1970ರಲ್ಲಿ (ರೀಡರ್) ಉಪಪ್ರಾಧ್ಯಾಪಕರಾಗಿ ಆಯ್ಕೆಯಾದರು. ಅನಂತರ ಚಿತ್ರದುರ್ಗದ ಸರ್ಕಾರಿ ಆರ್ಟ್ಸ್ ಕಾಲೇಜಿಗೆ ವರ್ಗವಾಯಿತು. ಶ್ರೀನಿವಾಸರವರು ಚಿತ್ರದುರ್ಗದಲ್ಲಿ ಹತ್ತು ವರ್ಷ ನೆಲೆಸಿದ್ದು ಈ ಅವಧಿ ಅವರ ಸಂಶೋಧನೆ, ಬರವಣಿಗೆಗೆ ಅತ್ಯಂತ ಅನುಕೂಲಕರವಾಗಿ ಪರಿಣಾಮಿಸಿತು. ಇತಿಹಾಸಕಾರರಾಗಿ, ಪ್ರಾಧ್ಯಾಪಕರಾಗಿ ಖ್ಯಾತ ಸಂಶೋಧಕರಾಗಿ ನಾಡಿಗೆಲ್ಲ ಪರಿಚಿತರಾಗಿದ್ದ ಡಾ॥ ಎಂ.ವಿ. ಶ್ರೀನಿವಾಸರವರನ್ನು ಮೈಸೂರು

ವಿಶ್ವವಿದ್ಯಾನಿಲಯ ಕೈಬಿಸಿ ಕರೆಯಿತು. ಅಲ್ಲಿನ ಪ್ರಾಧ್ಯಾಪಕರು, ಮುಖ್ಯಸ್ಥರು ಶ್ರೀನಿವಾಸರವರ ವಿದ್ವತ್ ಪ್ರೌಢಿಮೆ, ಸಂಶೋಧನಾ ಅನುಭವ ಸ್ನಾತಕೊತ್ತರ ವಿದ್ಯಾರ್ಥಿಗಳಿಗೆ ಲಭಿಸಿದರೆ ಒಳ್ಳೆಯದೆಂದು ತಿಳಿದು ಅವರನ್ನು ಆಹ್ವಾನಿಸಿತು. ಕಾಲೇಜಿನ ಶಿಕ್ಷಣ ಇಲಾಖೆಯ ಸೇವಾ ಹಿರಿತನವನ್ನು ಅಲ್ಲಿ ಬಡ್ತಿ ದೊರೆಯುವ ಸುಲಭ ಅವಕಾಶಗಳನ್ನು ಬಿಟ್ಟು ಶ್ರೀನಿವಾಸರವರು. 1980ರಲ್ಲಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ರೀಡರ್ ಆಗಿ ನೇಮಿಸಲ್ಪಟ್ಟರು ಅಲ್ಲಿಂದ ತಮ್ಮ ನಿವೃತ್ತಿಯವರೆಗೂ ಪ್ರಾಧ್ಯಾಪಕರಾಗಿ ಇತಿಹಾಸ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸಿದರು.

ವಿದ್ವತ್ತು ಪ್ರತಿಭೆ, ಬೋಧನಾ ಕಲಾ ಪ್ರೌಢಿಮೆ ಅನುಭವವಿರುವವರಿಗೆ ವಿಶ್ವವಿದ್ಯಾನಿಲಯಗಳಲ್ಲಿ ಹೆಚ್ಚಿನ ಅವಕಾಶವಿತ್ತಾದರೂ, ನಮ್ಮ ಪರಿಸರ, ಸ್ಥಳೀಯ ರಾಜಕೀಯ ಇವೆಲ್ಲಾ ಅನೇಕ ವೇಳೆ ತಮ್ಮದೇ ಆದ ತಡೆಗೋಡೆಗಳನ್ನು ನಿರ್ಮಿಸಿ ವ್ಯಕ್ತಿಯ ಸಂವೇದನೆಯನ್ನು ನಿಯಂತ್ರಿಸಿ ಪಟ್ಟ ಭದ್ರ ಹಿತಾಸಕ್ತಿಗಳು ಹಣ ಸಂಬಂಧಗಳು ತಮ್ಮ ಕರಾಳ ಹಸ್ತವನ್ನು ಎಲ್ಲಕಡೆಯೂ ಚಾಚಿ ಮೇಲೇರಲೂ ಬಿಡದೆ ಕಾಡುತ್ತದೆ. ವಿಶ್ವವಿದ್ಯಾನಿಲಯದಲ್ಲಿ ಓದಿಸುವುದು ಮೈಸೂರಿನ ಬೌದ್ಧಿಕ ಪರಿಸರದಲ್ಲಿ ಮುಳುಗುತ್ತಾ ಪ್ರೊ. ಶ್ರೀನಿವಾಸ್ ಸಂತೋಷ ಪಟ್ಟರು, ತಾವು ಬೆಳೆದಂತೆ ಇತರರನ್ನೂ ಬೆಳೆಸಿದರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿರುವಾಗ ಹೆಚ್ಚು ಹೆಚ್ಚು ವಿಚಾರ ಸಂಕೀರ್ಣ ಸಮ್ಮೇಳನಗಳಲ್ಲಿ ಭಾಗವಹಿಸಲು ಸಾಧ್ಯವಾಯಿತು. ಇತಿಹಾಸ ತಜ್ಞರು ವಿದ್ವಾಂಸರನ್ನು ಭೇಟಿ ಮಾಡಿ ವಿಚಾರ ವಿನಿಮಯ ಮಾಡಿಕೊಳ್ಳಲು ಅವಕಾಶವು ದೊರೆತು ಅವುಗಳ ಪೂರ್ಣ ಪ್ರಯೋಜನ ಪಡೆದುಕೊಂಡರು. ಹಲವಾರು ವಿಚಾರ ಸಂಕಿರಣಗಳನ್ನು ಸಂಘಟನೆ ವಿವಿಧ ವಿಶ್ವವಿದ್ಯಾನಿಲಯಗಳ ತಜ್ಞರ ಇತರ ವಿದ್ವಾಂಸರ ಸಂಪರ್ಕ ಪಡೆದುಕೊಂಡರು ಹಲವಾರು ವಿಚಾರ ಸಂಕಿರಣಗಳನ್ನು ಸಂಘಟಿಸಿ ವಿವಿಧ ವಿಶ್ವವಿದ್ಯಾನಿಲಯಗಳ ತಜ್ಞರ ಇತರ ವಿದ್ವಾಂಸರ ಸಂಪರ್ಕ ಪಡೆಯಲು ಸಾಧ್ಯವಾಯಿತು. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆಕಾಡೆಮಿಕ್, ಕೌನ್ಸಿಲ್, ಸೆನೆಟ್, ಕಲಾನಿಕಾಯ, ವಿದ್ಯಾರ್ಥಿ ಮಾರ್ಗದರ್ಶನ ಸಮಿತಿ ಮೊದಲಾದವುಗಲಲ್ಲಿ ಸದಸ್ಯರಾಗಿ ಉತ್ತಮ ಸೇವೆ ಸಲ್ಲಿಸಿದರು.

ಪ್ರೊ.ಎಂ.ವಿ.ಶ್ರೀನಿವಾಸರವರು ವಿದ್ವತ್ ಲೋಕ ಗುರುತಿಸಿ ಗೌರವಿಸುವುದು ಅವರೊಬ್ಬ ಶ್ರೇಷ್ಠ ಬೋಧಕ, ಲೇಖಕ, ಸಂಶೋಧಕ, ಸಂಘಟಿಕರೆಂದೂ, ಅವರ ಸಂಶೋಧನೆಯ ಕುರುಹು ಬಹಳ ವಿಸ್ತಾರವಾದುದ್ದು ಅವರ ಪುಸ್ತಕಗಳ ಸಂಖ್ಯೆಗಿಂತ ವಿಷಯ ವೈವಿದ್ಯೆ ಅವುಗಳ ಗುಣಮಟ್ಟ, ಮುಖ್ಯವಾದುದು. ಅವರ ಪುಸ್ತಕಗಳನ್ನು ಇಲ್ಲಿ ರಾಜಕೀಯ, ಇತಿಹಾಸ ಸಾಂಸ್ಕೃತಿಕ, ಇತಿಹಾಸ ಲೇಖನ ಸಂಗ್ರಹ ಸಂಪಾದನೆ ಸೃಜನಶೀಲ ಸಾಹಿತ್ಯ ಕೃತಿಗಳು ಮೊದಲಾದವು ಸೇರಿವೆ.

ಮೊದಲನೆಯದಾಗಿ ಅವರು ಸಂಪಾದಕರಾಗಿ ಹೊರತಂದ ಪತ್ರಿಕೆಗಳು ವಾರ್ಷಿಕ ಸಂಚಿಕೆಗಳು ಮೌಲ್ಯಯುತವಾಗಿ ಅವರು ಮೂರು ಕಾಲೇಜುಗಲಲ್ಲಿ. ಮೈಸೂರು ಚಿಕ್ಕಮಂಗಳೂರು, ಮತ್ತು ಸಿಂಧನೂರುಗಳಲ್ಲಿ ಹೊರ ತಂದ ವಾರ್ಷಿಕ ಸಂಚಿಕೆಗಳು ಮುಖ್ಯವಾದವು. ಎಂ.ವಿ. ಶ್ರೀನಿವಾಸರವರು ಇತಿಹಾಸ ಚಂದ್ರಿಕೆ ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿ ಅದನ್ನು ಆರು ವರ್ಷಗಳ ಕಾಲ ಉನ್ನತ ಮಟ್ಟದಲ್ಲಿ ನಡೆಸಿಕೊಂಡು ಬಂದರು. ಕರ್ನಾಟಕ, ಇತಿಹಾಸ ಕಾಂಗ್ರೆಸ್ ಅಧಿವೇಶನದಲ್ಲಿ ಅಧ್ಯಕ್ಷರಾಗಿದ್ದು ಡಾ: ಜಿ.ಎಸ್.ದೀಕ್ಷಿತ್‌ರು ಡಾ:ಶ್ರೀನಿವಾಸ್ ರವರು ಈ ಪತ್ರಿಕೆಯ ಮೂಲಕ ಇತಿಹಾಸಕ್ಕೆ ಒಳ್ಳೆಯ ಕೊಡುಗೆ ನಿಡಿದ್ದಾರೆಂದು ಶ್ಲಾಘಿಸಿದರು. ಹಾಗೇಯೇ ಇಂಡಾಲಜಿ ಕೇಂದ್ರದ ನಿರ್ದೇಶಕರಾಗಿದ್ದ ಅವರು ಪ್ರಾರಂಭಿಸಿದ ಮಲ್ಲಾರ ಪತ್ರಿಕೆ ಸಾಂಸ್ಕೃತಿಕ ಕ್ಷೇತ್ರದಲ್ಲಿ ಶ್ರೇಷ್ಠ

ಸ್ಥಾನ ಪಡೆದಿದೆ. ಚಿತ್ರದುರ್ಗ ಕೆಂಪೇಗೌಡ ಪ್ರಭುಗಳು, ಕೆಳದಿ ನಾಯಕರು ಮೊದಲಾದ ಪಾಳೆಯಗಾರರನ್ನು ಹಲವಾರು ಬೋಧಪ್ರದ ಲೇಖನಗಲನ್ನು ಗ್ರಂಥಗಳನ್ನು ರಚಿಸಿದ್ದಾರೆ ಕೊಡಗಿನ ಸಾಮಾಜಿಕ ಮತ್ತು ಆರ್ಥಿಕ ಇತಿಹಾಸವನ್ನು ಒಂದು ಪ್ರಾಜೆಕ್ಟ್ ಅಡಿಯಲ್ಲಿ ಕೊಡಗಿನ ರೆಸಿಡೆಂಟ್ಸ್ ರಿಕಾರ್ಡ್‌ಗಳನ್ನು ಅಭ್ಯಾಸ ಮಾಡಿ ಇಪ್ಪತ್ತಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ಸದಾ ಅಧ್ಯಯನ ಅಧ್ಯಾಪನ ಸಂಶೋಧನೆಯಲ್ಲಿ ನಿರತರಾಗಿರುವ ಪ್ರೊ; ಶ್ರೀನಿವಾಸರವರು ತಮ್ಮ ಜೀವನದುದ್ದಕ್ಕೂ ಸಮಾಜ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅನುಪಮವಾದ ಪಾಂಡಿತ್ಯ, ಪ್ರತಿಭೆ. ಸೃಜನಶೀಲತೆಯೊಂದಿಗೆ ಸದ್ಗುಣಗಳನ್ನು ರೂಢಿಸಿಕೊಂಡು ಎಲ್ಲರ ಗೌರವಕ್ಕೆ ಪಾತ್ರರಾಗಿದ್ದಾರೆ. ನಿರ್ಮಲ ನಿರಹಂಕಾರದ ನಡತೆ. ನಿಸ್ವಾರ್ಥ ಸೇವಾ ಮನೋಭಾವದ ನಡೆನುಡಿ ಅನ್ಯಾಯದ ವಿರುದ್ದ ಹೋರಾಡುವ ಛಲ ಅವರಲ್ಲಿ ಎದ್ದು ಕಾಣುವ ಸದ್ಗುಣಗಳು ಬಾಳಿನುದ್ದಕ್ಕೂ ತಮ್ಮಲ್ಲಿ ನೋವನ್ನು ನುಂಗಿಕೊಂಡು ಇತರರಿಗೆ ಸುಖ ಸಂತಸವನ್ನು ನೀಡುತ್ತ ಬಂದಿರುವ ಪ್ರೊ.ಶ್ರೀನಿವಾಸ್ ರವರುನ್ನು ಎಲ್ಲರೂ ಪೂಜ್ಯ ಭಾವನೆಯಿಂದ ನೋಡುತ್ತಾ ಬಂದಿದ್ದಾರೆ.

ವಿದ್ಯಾರ್ಥಿಯಾಗಿ, ಸಂಶೋಧಕರಾಗಿ, ವಿದ್ವಾಂಸರಾಗಿ, ತಾವು ಪಡೆದುಕೊಂಡ ವಿದ್ಯೆ ಪಾಂಡಿತ್ಯವನ್ನು ನಿರ್ವಂಚನೆಯಿಂದ ವಿದ್ಯಾರ್ಥಿಗಳಿಗೆ, ಅದನ್ನು ಕೇಳಿದವರಿಗೆ ನೀಡುತ್ತಾ ಬಂದಿರುವ ಶ್ರೀನಿವಾಸ ಸಹಸ್ರ ಸಹಸ್ರ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಿ ವಂದನೀಯರಾಗಿದ್ದಾರೆ. ಹಲವು ಹತ್ತು ದೇಶಗಳನ್ನು ಸುತ್ತಿ ಅಲ್ಲಿನ ಸುಸಜ್ಜಿತ ಗ್ರಂಥಾಲಯಗಳಿಂದ ದಾಖಲೆಗಳನ್ನು ಮಾಹಿತಿಯನ್ನು ಪಡೆದು ಜೇನುಹುಳು ಮಧುವನ್ನು ಸಂಗ್ರಹಿಸುವಂತೆ ಬೆಟ್ಟ ಗುಡ್ಡ ಕಾಡು, ಕೋಟೆ, ಪಾಳುದೇಗುಲ, ಸ್ಮಾರಕಗಳನ್ನು ಸುತ್ತಿ ಕ್ಷೇತ್ರಕಾರ್ಯನಡೆಸಿ ವಿಷಯ ಸಂಗ್ರಹಿಸಿ ತಮ್ಮ ವಿದ್ಯಾರ್ಥಿಗಳ ಉತ್ತಮ ಭವಿಷ್ಯಕ್ಕೆ ನಾಂದಿಯಾಡಿದರು.

ಸಂದರ್ಶನ

1. ಕೆ.ಎಸ್. ರಾಜಣ್ಣ
2. ಎಂ.ಇ. ಶ್ರೀನಿವಾಸ್
3. ಕೆ.ಎಸ್. ರಾಜಣ್ಣ
4. ಅದೇ ಕೆ.ಎಸ್. ರಾಜಣ್ಣ
5. ಟಿ. ಚಂದ್ರಪ್ಪ
6. ಕೆ.ಎಸ್.ರಾಜಣ್ಣ
7. ಕೆ.ಎಸ್.ರಾಜಣ್ಣ
8. ಎನ್. ನಂದೀಶ್ವರ
9. ಡಿ. ಚಂದ್ರಪ್ಪ
10. ಎನ್. ನಂದೀಶ್ವರ
11. ಎಂ. ವಿ. ಶ್ರೀನಿವಾಸ್
12. ಎನ್ ನಂದೀಶ್ವರ
13. ಎನ್. ನಂದೀಶ್ವರ
14. ಚಂದ್ರಪ್ಪ (ಸಂ. ಜೇನ್ನೂಡಿ ಪು.23)
15. ಎಚ್.ಆರ್. ದಾಸೇಗೌಡ
16. ಎಚ್.ಆರ್. ದಾಸೇಗೌಡ
17. ಎನ್. ನಂದೀಶ್ವರ (ಜೇನ್ನೂಡಿ. ವಿ.ಸಂ. ತುಮಕೂರು 2010)
18. ಎನ್. ನಂದೀಶ್ವರ
19. ಸುಧಾ ಎನ್. ರಾವ್
20. ಎಚ್.ಆರ್. ದಾಸೇಗೌಡ
21. ಎಚ್.ಆರ್.ದಾಸೇಗೌಡ
22. ಎಚ್.ಆರ್.ದಾಸೇಗೌಡ
23. ಎನ್. ನಂದೀಶ್ವರ
24. ಬಿ. ಚಂದ್ರಪ್ಪ
25. ಎಚ್.ಆರ್. ದಾಸೇಗೌಡ
26. ಸುಧಾ ಎನ್. ರಾವ್
27. ಬಿ.ಎನ್. ನಾಯ್ಡು
28. ಎನ್. ನಂದೀಶ್ವರ
29. Study in Karnataka History (1983)
30. ಎನ್. ನಂದೀಶ್ವರ

# ಅಧ್ಯಾಯ –3
## ಸಂಶೋಧಕರಾಗಿ ಎಂ.ವಿ. ಶ್ರೀನಿವಾಸ್ ರವರು

ಡಾ.ಎಂ.ವಿ. ಶ್ರೀನಿವಾಸರವರು ನಮ್ಮೊಡನಿರುವ ಒಬ್ಬ ಅಪರೂಪದ ಮೇಧಾವಿ, ಪ್ರಾಧ್ಯಾಪಕ, ಸಂಶೋಧಕರು, ಸುಮಾರು 40 ವರ್ಷಗಳ ಬೋಧನೆ, ಅಧ್ಯಯನ, ಸಂಶೋಧನೆ ಮಾಡುತ್ತಿದ್ದು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕ ಹುದ್ದೆಯಿಂದ ನಿವೃತ್ತರಾದರೂ ಸಹ ಸಂಶೋಧನೆ ಬರವಣಿಗೆ, ವಿವಿಧ ಶೈಕ್ಷಣಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಇವರ ಜೀವನ ಮತ್ತು ಸಾಧನೆ ಆದರ್ಶವಾದುದು. ಅನುಪಮವಾದುದು.

ಎಂ.ಎ ಪರೀಕ್ಷೆಯಾದ ಮೇಲೆ ಕನಾಟಕದ ಅನೇಕ ಕಡೆ ಕ್ಷೇತ್ರ ಕಾರ್ಯ ಕೈಗೊಂಡರು. ಹಲವಾರು ಇತಿಹಾಸ ತಜ್ಞರನ್ನು, ಪ್ರಾಧ್ಯಾಪಕರನ್ನು ಸಂದರ್ಶನ ಮಾಡುತ್ತಿದ್ದರು. ಪುಣೆಯ ಭಾರತಿಯ ಇತಿಹಾಸ ಸಂಶೋಧನಾ ಮಂಡಲದಲ್ಲಿ ಮೂರು ತಿಂಗಳ ಅಭ್ಯಾಸ ನಡೆಸಿ ಅಲ್ಲಿದ್ದ ಮರಾಠಿ ಗ್ರಂಥ ಮತ್ತು ದಾಖಲೆಗಳನ್ನು ಅಭ್ಯಾಸ ಮಾಡಿದರು. ಹಾಗೆ ಸಂಗ್ರಹಿಸಿದ ಮಾಹಿತಿಯನ್ನು ಬಳಸಿಕೊಂಡು ಮೂರು ಪುಸ್ತಕಗಳನ್ನು ಬರೆದರು. ಅವು ಅವರಿಗೆ ಒಳ್ಳೆಯ ಹೆಸರನ್ನು ತಂದುಕೊಟ್ಟವು. ಶೈಕ್ಷಣಿಕ ಕ್ಷೇತ್ರದಲ್ಲಿ ಉತ್ತಮ ಸಾಧನೆ ಮಾಡಿದ ಕಾರ್ಯಕ್ಕಾಗಿ ಇತಿಹಾಸ ಅಧ್ಯಾಪಕರಾಗಿ ನೇಮಿಸಲ್ಪಟ್ಟರು. ಬೆಂಗಳೂರು, ಚಿಕ್ಕಮಂಗಳೂರು, ತುಮಕೂರು, ಮೊದಲಾದ ಕಾಲೇಜುಗಳಲ್ಲಿ ಅಧ್ಯಾಪಕರಾಗಿ ಕೆಲಸ ಮಾಡಿ, ತಾವು ಕಲಿತದ್ದನ್ನು ವಿದ್ಯಾರ್ಥಿಗಳಿಗೆ ತಿಳಿಸಿ ಅವರಲ್ಲಿ ಇತಿಹಾಸದಲ್ಲಿ ಆಸಕ್ತಿ ಶ್ರದ್ದೆ ಮೂಡುವಂತೆ ಮಾಡಿದರು. ಇತಿಹಾಸ ಬೋಧನೆಯೊಂದಿಗೆ ಪಠ್ಯೇತರ ಚಟುವಟಿಕೆಗಳನ್ನು ಅರ್ಥಪೂರ್ಣವಾಗಿ ಹಮ್ಮಿಕೊಂಡು ವಿದ್ಯಾರ್ಥಿಗಳ ವ್ಯಕ್ತಿತ್ವ ವಿಕಾಶವುಂಟು ಮಾಡಲು ಶ್ರಮಿಸಿದರು. 1966 ಭಾರತದ ಬಹು ಪ್ರತಿಷ್ಠಿತ, ಜವಾಹರ್ ಲಾಲ್ ನೆಹರು ವಿಶ್ವವಿದ್ಯಾನಿಲಯದಲ್ಲಿ ಆಗಿನ (ಐ.ಎಸ್. ಐ.ಎಸ್. ಸಂಶೋಧನಾ ಸಂಸ್ಥೆ) ಸಂಶೋಧನೆ ಮಾಡಲು ಮೂರು ವರ್ಷ ಸಂಬಳವಿಲ್ಲದ ರಜೆ ಪಡೆದು ದೆಹಲಿಗೆ ಹೋದರು.

ದೆಹಲಿಯ ಐ.ಎಸ್.ಐ.ಎಸ್. (ಇಂಡಿಯನ್ ಸ್ಕೂಲ್ ಆಪ್ ಇಂಟರ್ ನ್ಯಾಷನಲ್ ಸ್ಟಡೀಸ್) ಇದ್ದದ್ದು ಸಪ್ರೊ ಹೌಸ್ ನಲ್ಲಿ ಅಲ್ಲಿದ್ದ ಗ್ರಂಥಾಲಯ ಏಷ್ಯಾದಲ್ಲೇ ಅತ್ಯಂತ ದೊಡ್ಡದು. ಅಲ್ಲಿ ಬೋಧಿಸುತ್ತಿದ್ದ ಪ್ರಾಧ್ಯಾಪಕರು ರಾಷ್ಟ್ರೀಯ ಅಂತರಾಷ್ಟ್ರಿಯ ಮಟ್ಟದಲ್ಲಿ ಹೆಸರು ಮಾಡಿದ್ದ ವಿದ್ವಾಂಸರು. ಆ ಸಂಸ್ಥೆಯಲ್ಲಿ ಪ್ರವೇಶ ಸುಲಭವಾಗಿರಲಿಲ್ಲ. ಸಾಮಾನ್ಯವಾಗಿ ಒಂದು ರಾಜ್ಯಕ್ಕೆ ಒಬ್ಬರಿಗೆ ಮಾತ್ರ ಪ್ರವೇಶ ಸಿಗುತ್ತಿತ್ತು. ಶ್ರೀನಿವಾಸ್ ರವರ ಶೈಕ್ಷಣಿಕ ಸಾಧನೆ ಅವರ ಪ್ರಕಟನೆಗಳ ಆಧಾರದ ಮೇಲೆ ಈ ಪ್ರತಿಷ್ಠಿತ ಸಂಸ್ಥೆಯಲ್ಲಿ ಅವರಿಗೆ ಪ್ರವೇಶ ಸಿಕ್ಕಿದ್ದಿತು.

ಭಾರತದ ಅತ್ಯಂತ ಪ್ರತಿಭಾನ್ವಿತ ವಿದ್ಯಾರ್ಥಿಗಳೊಡನೆ ಅತ್ಯಂತ ಶ್ರೇಷ್ಠ ಪ್ರಾಧ್ಯಾಪಕರ ಬಳಿ ಅಧ್ಯಯನ, ಸಂಶೋಧನೆ ಶ್ರೀನಿವಾಸ್ ರವರಿಗೆ ರೋಮಾಂಚನವಾದ ಅನುಭವವಾಗಿದ್ದಿತು. ಜಗತ್ತಿನ ವಿವಿಧ ದೇಶಗಳಿಂದ ವಿದ್ವಾಂಸರು, ಇತಿಹಾಸ ತಜ್ಞರು ಈ ಸಂಸ್ಥೆಗೆ ಬಂದು ಭಾಷಣ, ಚರ್ಚೆ, ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರು. ಇಲ್ಲಿನ ವಾತಾವರಣ. ಸೌಲಭ್ಯಗಳು ಕಾರ್ಯಕ್ರಮಗಳು ಒಬ್ಬ ಉತ್ತಮ ಶೋಧಕರನ್ನು ರೂಪಿಸಲು ಪೂರ್ಣ ಸಹಾಯಕವಾಗಿದ್ದವು. ಈ ಸಂಸ್ಥೆಯಲ್ಲಿನ ಎಲ್ಲಾ

ಸೌಲಭ್ಯ ಅನುಕೂಲಗಳನ್ನು ಉಪಯೋಗಿಸಿಕೊಂಡ ಶ್ರೀನಿವಾಸ್ರವರು ಅಪಾರ ಅನುಭವವನ್ನು ಗಳಿಸಿಕೊಂಡರು. ಅವರ ಜ್ಞಾನದಾಹ ಇನ್ನೂ ಹಿಂಗಿರಲಿಲ್ಲ. ಅಷ್ಟರಲ್ಲಿ ಪ್ರತಿಷ್ಠಿತ ಫುಲ್ ಬ್ರೈಟ್ ಸ್ಕಾಲರ್ ಶಿಪ್ ಅವರನ್ನು ಅರಸಿ ಬಂದಿತು. ಪ್ರಪಂಚದ ಪ್ರಸಿದ್ಧ ವಿಶ್ವವಿದ್ಯಾನಿಲಯಗಳಲ್ಲಿ ಒಂದಾದ ನ್ಯೂಯಾರ್ಕ್‌ನ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ, ಸಂಶೋಧನೆ ಮಾಡಲು ಅವರಿಗೆ ಆಹ್ವಾನ ದೊರಕಿತು.

ಅಮೇರಿಕಾದಲ್ಲಿ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ಮಾಡುವುದು ಒಂದು ರೂಚಕ ಅನುಭವ ವಿವಿಧ ದೇಶಗಳಿಂದ ಬಂದಿದ್ದ ಪ್ರತಿಭಾವನ್ವಿತ ವಿದ್ಯಾರ್ಥಿಗಳು ಉತ್ಕೃಷ್ಠ ಮಟ್ಟದ ಗ್ರಂಥಾಲಯ ಮೊದಲಾದ ಸೌಲಭ್ಯಗಳು, ನುರಿತ ವಿದ್ವಾಂಸರು, ವಿಷಯ ತಜ್ಞರ ಮಾರ್ಗದರ್ಶನ ಅವರ ಸಂಶೋಧನೆಗೆ ಸದಾವಕಾಶವನ್ನು ಒದಗಿಸಿಕೊಟ್ಟವು. ನ್ಯೂಯಾರ್ಕ್‌ನಿಂದ ಮುಂದೆ ವಾಷಿಂಗ್ ಟನ್ ಡಿ.ಸಿ.ಗೆ ಹೋಗಿ ಸಂಶೋಧನೆ ಮುಂದುವರಿಸಿದರು. ಪ್ರಪಂಚದ ಅತ್ಯಂತ ದೊಡ್ಡ ಗ್ರಂಥಾಲಯ ಲೈಬ್ರರಿ ಆಫ್ ಕಾಂಗ್ರೇಸ್ ಮತ್ತು ರಾಷ್ಟ್ರಿಯ ಪತ್ರಾಗಾರದಲ್ಲಿ ಸುಮಾರು ಒಂದು ವರ್ಷ ಕಾಲ ಅಧ್ಯಯನ ನಡೆಸಿದರು. ಈ ಮಧ್ಯ ಅಮೇರಿಕಾದ ಯೇಲ್ ವಿಶ್ವವಿದ್ಯಾನಿಲಯ, ಫಿಲಿಡೆಲ್ಫಿಯಾ ವಿಶ್ವವಿದ್ಯಾನಿಲಯ, ಹಾರ್ವರ್ಡ್ ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಯನ ಮಾಡಿದರು.

ಅಮೇರಿಕ ಸರ್ಕಾರದ ಕೆಲವು ಉನ್ನತ ಅಧಿಕಾರಿಗಳನ್ನು ರಾಯಭಾರಿಗಳನ್ನ ಸಂಸದರನ್ನು ರಾಜಕೀಯ ಮುಖಂಡರನ್ನು ಸಂದರ್ಶಿಸಿ ಅವರಿಂದ ಬಹುಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಿದರು.

ಭಾರತಕ್ಕೆ ಹಿಂದಿರುಗಿದ ಮೇಲೆ ಬೆಂಗಳೂರಿನ ಆರ್ಟ್ಸ್ ಕಾಲೇಜಿನಲ್ಲಿ ಬೋಧನೆ ಪ್ರಾರಂಭಿಸಿದರು. ಅವರಿಗೆ ಪಿ.ಹೆಚ್.ಡಿ ಲಭಿಸಿದ್ದು ಪುಸ್ತಕ ಪ್ರಕಟಣೆ ಮೊದಲಾದ ಅಂಶಗಳ ಆಧಾರದ ಮೇಲೆ 1970ರಲ್ಲಿ ರೀಡರ್ ಆಗಿ ಆಯ್ಕೆಯಾದರು. ಅನಂತರ ಚಿತ್ರದುರ್ಗದ ಸರ್ಕಾರಿ ಆರ್ಟ್ಸ್ ಕಾಲೇಜಿಗೆ ವರ್ಗವಾಯಿತು.

ಶ್ರೀನಿವಾಸರವರು ಚಿತ್ರದುರ್ಗದಲ್ಲಿ ಹತ್ತು ವರ್ಷ ನೆಲೆಸಿ ಈ ಅವದಿಯಲ್ಲಿ ಸಂಶೋಧನೆ, ಬರವಣಿಗೆಗೆ ಅತ್ಯಂತ ಅನುಕೂಲಕರವಾಗಿ ಪರಿಣಮಿಸಿತು. ಚಿತ್ರದುರ್ಗ ಶ್ರೀಮಂತವಾದ ಇತಿಹಾಸಕಾರರ ಸ್ವರ್ಗವನ್ನಬಹುದು. ಅಲ್ಲಿನ ಪ್ರಾಚೀನ ಇತಿಹಾಸ. ಚಿತ್ರದುರ್ಗ ಮತ್ತು ಇತರ ಪಾಳೆಯಗಾರರ ಇತಿಹಾಸ ಜಿಲ್ಲೆಯ ವೈವಿದ್ಯಮಯ ಸ್ಮಾರಕಗಳನ್ನು ವೀಕ್ಷಿಸಿ ಅವುಗಳ ಅಧ್ಯಯನವನ್ನು ಕೈಗೊಂಡರು. ಈ ಸಮಯದಲ್ಲಿ ಹೊರಬಂದ ಅವರ ಕೃತಿ ಚಂದ್ರವಳ್ಳಿ ಅವರಿಗೆ ದೊಡ್ಡ ಕೀರ್ತಿಯನ್ನು ತಂದು ಕೊಟ್ಟಿತು. ಸಂಶೋಧಕ ಲಕ್ಷ್ಮಣತೆಲಗಾವಿ. ಅವರೊಂದಿಗೆ ಸಂಪಾದಿಸಿದ ಈ ಕೃತಿ ಚಿತ್ರದುರ್ಗ ಜಿಲ್ಲೆಯ ಒಂದು ಸಮಗ್ರ ಅಧ್ಯಯನವಲ್ಲದೆ ಕೆಲವು ಅಮೂಲ್ಯವಾದ ಆಧಾರಗಳನ್ನೊಳಗೊಂಡ ಸಂಪಾದಿತ ಕೃತಿ.

ಚಿತ್ರದುರ್ಗದಲ್ಲಿ ಶ್ರೀನಿವಾಸರ ಮಹತ್ವದ ಕೊಡುಗೆ ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿಯ ಸ್ಥಾಪನೆ ಈ ಸಂಸ್ಥೆಯಲ್ಲಿ ಲಕ್ಷ್ಮಣತೆಲಗಾವಿ, ಬಿ.ರಾಜಶೇಖರಪ್ಪ, ವೆಂಕಣ್ಣಚಾರ್,

ಜಯಣ್ಣ, ಪ್ರಭಾಕರ್ ಪಾಂಡುರಂಗ ರಾಮಾಜೋಯಿಷ್ ಮೊದಲಾದ ಇತಿಹಾಸ ಪ್ರೇಮಿಗಳಿದ್ದುದು ಈ ಸಂಸ್ಥೆ ಇತಿಹಾಸ ಸಂಶೋಧನೆ ಮತ್ತು ಪ್ರಕಟಣ ಕಾರ್ಯಗಳನ್ನು ಮಾಡಿಕೊಂಡು ನಾಡಿನ ಬಹು ಯಶಸ್ವಿ ಸಂಶೋಧನಾ ಸಂಸ್ಥೆ ಎಂಬ ಖ್ಯಾತಿಯನ್ನುಗಳಿಸಿತು.

ಚಿತ್ರದುರ್ಗದ ಹುಲ್ಲೂರು ಶ್ರೀನಿವಾಸ ಜೋಯಿಸರು, ಚಿತ್ರದುರ್ಗದ ಬಗ್ಗೆ ಸಾಕಷ್ಟು ಕೆಲಸ ಮಾಡಿ ಹೆಸರು ಗಳಿಸಿದ್ದರು. ಅವರು ಬರೆದ ಲೇಖನಗಳನ್ನು ಒಂದು ಕಡೆ ಸೇರಿಸುವ ಕಾರ್ಯವಾಗಬೇಕಾಗಿತ್ತು. ಈ ಕಾರ್ಯವನ್ನು ಕೈಗೆತ್ತಿಕೊಂಡು ಲಕ್ಷ್ಮಣತೆಲಗಾವಿ ಅವರೊಂದಿಗೆ ಐತಿಹಾಸಿಕ ಲೇಖನಗಳು ಮತ್ತು ಸಂಶೋಧನಾ ಲೇಖನಗಳು ಎಂಬ ಗ್ರಂಥವನ್ನು ಸಂಪಾದಿಸಿ ಹೊರತಂದರು.

ಚಿತ್ರದುರ್ಗದಲ್ಲಿ ಶ್ರೀನಿವಾಸರು ಇದ್ದ ಎಂಟು ವರ್ಷದ ಅವಧಿ ಬಹುಫಲ ಪ್ರದವಾದುದ್ದು ಚಿತ್ರ ದುರ್ಗದಲ್ಲಿ ಚಿಂತನ ಎಂಬ ಸಾಹಿತ್ಯ ಬಳಗವನ್ನು ಸ್ಥಾಪಿಸಿ ಅದರ ಆಶ್ರಯದಲ್ಲಿ ಪ್ರತಿವರ್ಷ ಸಾಹಿತ್ಯ ಸಲ್ಲಾಪದ ಕಾರ್ಯವನ್ನು ಹಮ್ಮಿಕೊಳ್ಳಲಾಯಿತು. ವಿವಿಧ ಸಾಂಸ್ಕೃತಿಕ ಸಂಘಗಳಿಂದ ಒಟ್ಟು 14 ಪುಸ್ತಕಗಳ ಪ್ರಕಟಣೆಯಲ್ಲಿ ಅವರು ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಭಾಗವಹಿಸುತ್ತಿದ್ದರು. ವಿದ್ವತ್ತು, ಪ್ರತಿಭೆ ಬೋಧನಾ ಕಲಾ ಪ್ರೌಢಿಮೆ, ಅನುಭವವಿರುವವರೆಗೆ ವಿಶ್ವವಿದ್ಯಾನಿಲಯಗಳಲ್ಲಿ ಹೆಚ್ಚಿನ ಅವಕಾಶ ವಿತ್ತಾದರೂ. ನಮ್ಮ ಪರಿಸರ, ಸ್ಥಳೀಯ ರಾಜಕೀಯ ಇವೆಲ್ಲಾ ಅನೇಕ ವೇಳೆ ತಮ್ಮದೇ ಆದ ತಡೆಗೋಡೆಗಳನ್ನು ನಿರ್ಮಿಸಿ ವ್ಯಕ್ತಿಯ ಸಂವೇದನೆಯನ್ನು ನಿಯಂತ್ರಿಸಿ ಪಟ್ಟಭದ್ರಹಿತಾಸಕ್ತಿಗಳು ಹಣ ಸಂಬಂಧಗಳು ತಮ್ಮ ಕರಾಳ ಹಸ್ತವನ್ನು ಎಲ್ಲ ಕಡೆಯೂ ಚಾಚಿ ಮೇಲೇಳಲೂ ಬಿಡುತ್ತಿರಲಿಲ್ಲ.
ಮೊದಲನೆಯದಾಗಿ ಅವರು ಸಂಪಾದಕರಾಗಿ ಹೊರತಂದ ಪತ್ರಿಕೆಗಳು ವಾರ್ಷಿಕ ಸಂಚಿಕೆಗಳು ಮೌಲ್ಯಯುತವಾಗಿ ಅವರು 3 ಕಾಲೇಜುಗಳಲ್ಲಿ, (ಮೈಸೂರು, ಚಿಕ್ಕಮಂಗಳೂರು ಮತ್ತು ಸಿಂಧನೂರುಗಳಲ್ಲಿ) ಹೊರತಂದ ವಾರ್ಷಿಕ ಸಂಚಿಕೆಗಳು ಮುಖ್ಯವಾದವು. ಇತಿಹಾಸ ಚಂದ್ರಿಕೆ ಎಂಬ ಮಾಸ ಪತ್ರಿಕೆಯನ್ನು ಪ್ರಾರಂಭಿಸಿ ಅದನ್ನು ಆರು ವರ್ಷಗಳ ಕಾಲ ಉನ್ನತ ಮಟ್ಟದಲ್ಲಿ ನಡೆಸಿಕೊಂಡು ಬಂದರು. ಕರ್ನಾಟಕ ಇತಿಹಾಸ ಕಾಂಗ್ರೇಸ್ ಅಧಿವೇಶನದಲ್ಲಿ ಅಧ್ಯಕ್ಷರಾಗಿದ ಡಾ॥ ಜಿ.ಎಸ್. ದೀಕ್ಷತ್ ರವರು ಡಾ॥ ಶ್ರೀನಿವಾಸರು ಈ ಪತ್ರಿಕೆಯ ಮೂಲಕ ಇತಿಹಾಸಕ್ಕೆ ಒಳ್ಳೆಯ ಕೊಡುಗೆ ನೀಡಿದ್ದಾರೆಂದು ಶ್ಲಾಘಿಸಿದರು.

ಮಧ್ಯಕಾಲೀನ ಸಂಸ್ಥಾನಗಳನ್ನು ಕುರಿತು ಡಾ: ಎಂ.ವಿ. ಶ್ರೀನಿವಾಸರು ಮೂಲ ದಾಖಲೆಗಳನ್ನು ಅಭ್ಯಾಸ ಮಾಡಿ ಕೆಲವು ಗ್ರಂಥಗಳನ್ನು ರಚಿಸಿದ್ದಾರೆ. ಮಹಾರಾಷ್ಟ್ರದ ಪ್ರಸಿದ್ದ ಪೇಶ್ವೆ ಬಾಜೀರಾಯನನ್ನು ಕುರಿತು ಒಂದು ಗ್ರಂಥವನ್ನು ಎಪ್ಪತ್ತರ ದಶಕದಲ್ಲಿ ಪ್ರಕಟಿಸಿದ್ದಾರೆ.

ಈ ಭಾರತದ ಸಲೋಮೆ ಎಂದು ಪ್ರಸಿದ್ದವಾಗಿದ್ದ ಮಸ್ತಾನಿಯ ರೋಮಾಂಚಕತೆಯನ್ನು ಐತಿಹಾಸಿಕ ಕಾದಂಬರಿಯಾಗಿ 1962 ರಲ್ಲಿ ಬರೆದುದು. ಅವರ ಪ್ರಾರಂಭದ ಸಾಧನೆಗಳಲ್ಲಿ ಮುಖ್ಯವಾದದ್ದು.

ಪ್ರೊ.ಶ್ರೀನಿವಾಸ್ ರವರ ಓದಿನ ಹರವು ಸಂಶೋಧನೆಯ ವಿಸ್ತಾರ ಬಹುದೊಡ್ಡದು. ಅಮೇರಿಕಾ ಇತಿಹಾಸ, ಭಾರತ ಅಮೇರಿಕ ರಾಜಕೀಯ ಸಂಬಂಧದ ಬಗ್ಗೆ ಪಿ.ಎಚ್.ಡಿಗಾಗಿ ಸಂಶೋಧನೆ ನಡೆಸಿ ಮಹಾ ಪ್ರಬಂಧವನ್ನು 26 ಸಂಶೋಧನಾ ಪ್ರಬಂಧಗಳನ್ನು ರಚಿಸಿದರು. ಅನಂತರ ಮರಾಠ ಇತಿಹಾಸ, ಕರ್ನಾಟಕದ ಹಲವು ಅರಸುಮನೆತನಗಳ ಬಗ್ಗೆ ಅಧ್ಯಯನ ಮಾಡಿ ನಾಲ್ಕು ಮಸ್ತಕ ಬರೆದರು ಕರ್ನಾಟಕದ ಪಾಳೇಯಗಾರರ ಅಧ್ಯಯನ ಅವರ ಪ್ರಿಯವಾದ ಕ್ಷೇತ್ರ ಕೊಡಗಿನ ಇತಿಹಾಸ, ಚಿತ್ರದುರ್ಗದ ಕೆಳದಿನಾಯಕರು, ಕೆಂಪೇಗೌಡ ಅವರ ಇತಿಹಾಸವನ್ನು ಧೀರ್ಘಕಾಲ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೋಧಿಸಿ ಅನೇಕ ಸಂಶೋಧನಾ ಪ್ರಬಂಧಗಳನ್ನು ಬರೆದಿದ್ದಾರೆ. ವಿಚಾರಗೋಷ್ಠಿಗಳಲ್ಲಿ ಪ್ರಬಂಧವನ್ನು ಮಂಡಿಸುತ್ತಾ ಬಂದಿದ್ದಾರೆ. ಹಲವಾರು ಗೋಷ್ಠಿ ಸಮ್ಮೇಳಗಳಲ್ಲಿ ಅಧ್ಯಕ್ಷತೆ ವಹಿಸಿ ಪ್ರಮುಖ ಪಾತ್ರವಹಿಸಿ, ಉಪಯುಕ್ತವಾದ ಸಲಹೆ ನೀಡಿದ್ದಾರೆ. ಬಾಳಿನುದ್ದಕ್ಕೂ ಅಂತಸ್ತು, ಆದಾಯ ಅವಕಾಶಗಳನ್ನು ಬಯಸದೆ ಪದವಿ ಪ್ರಶಸ್ತಿಗಳಿಗೆ ಆಸೆ ಪಡದೆ ಇತಿಹಾಸಲೋಕದಲ್ಲಿ ಹುದುಗಿರುವ ಸತ್ಯ ಸಂಗತಿಯನ್ನು ಹೊರತೆಗೆದು ಎಲ್ಲರಿಗೂ ನೀಡಿ ತಮ್ಮ ಸಮರ್ಪಣಭಾವದಿಂದ ಸರ್ವರ ಆದರಕ್ಕೆ ಪಾತ್ರರಾಗಿದ್ದಾರೆ. ಹಾಗೇಯೇ ತಮ್ಮ ಸಂಶೋಧನೆಯ ಸೇವೆಯನ್ನು ಹೊಸ ಹೊಸ ಕ್ಷೇತ್ರಗಳಿಗೆ ಹೊಸ ಎತ್ತರಗಳಿಗೆ ಕೊಂಡೊಯ್ದಿದ್ದಾರೆ.

**ವಿದೇಶದಲ್ಲಿ ವ್ಯಾಸಂಗ:**

ಭಾರತದ ಅತ್ಯಂತ ಪ್ರತಿಭಾನ್ವಿತ ವಿದ್ಯಾರ್ಥಿಗಳೊಡನೆ ಶ್ರೇಷ್ಠ ಪ್ರಾಧ್ಯಾಪಕರ ಬಳಿ ಅಧ್ಯಯನ, ಸಂಶೋಧನೆ ಶ್ರೀನಿವಾಸರವರಿಗೆ ರೋಮಾಂಚನವಾದ ಅನುಭವವಾಗಿದ್ದಿತು. ಜಗತ್ತಿನ ವಿವಿಧ ದೇಶಗಳಿಂದ ವಿದ್ವಾಂಸರು, ಇತಿಹಾಸ ತಜ್ಞರು ಈ ಸಂಸ್ಥೆಗೆ (ದೆಹಲಿಯ ಐ.ಎಸ್.ಐ.ಎಸ್) ಬಂದು ಭಾಷಣ, ಚರ್ಚೆ, ಗೋಷ್ಠಿಗಳಲ್ಲಿ ಭಾಗವಹಿಸುತ್ತಿದ್ದರು. ಇಲ್ಲಿನ ವಾತಾವಣ, ಸೌಲಭ್ಯಗಳು ಕಾರ್ಯಕ್ರಮಗಳು ಒಬ್ಬ ಉತ್ತಮ ಶೋಧಕರನ್ನು ಅನ್ವೇಷಕರನ್ನು ರೂಪಿಸಿಲು ಪೂರ್ಣ ಸಹಾಯಕವಾಗಿದ್ದವು.

ಈ ಸಂಸ್ಥೆಯಲ್ಲಿನ ಎಲ್ಲಾ ಸೌಲಭ್ಯ, ಅನುಕೂಲಗಳನ್ನು ಉಪಯೋಗಿಸಿಕೊಂಡ ಶ್ರೀನಿವಾಸರವರು ಅಪಾರ ಅನುಭವವನ್ನು ಗಳಿಸಿಕೊಂಡರು ಅವರ ಜ್ಞಾನದಾಹ ಇನ್ನೂ ಹಿಂಗಿರಲಿಲ್ಲ. ಅಷ್ಟರಲ್ಲಿ ಪ್ರತಿಷ್ಠಿತ ಪುಲ್ ಬ್ರೈಟ್ ಸ್ಕಾಲರ್ ಶೀಪ್ ಅವರನ್ನು ಅರಸಿ ಬಂದಿತು. ಪ್ರಪಂಚದ ಪ್ರಸಿದ್ಧ ವಿಶ್ವವಿದ್ಯಾನಿಲಯಗಳಲ್ಲಿ ಒಂದಾದ ನ್ಯೂಯಾರ್ಕ್‌ನ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಸಂಶೋಧನೆ ಮಾಡಲು ಅವರಿಗೆ ಆಹ್ವಾನ ದೊರೆಕಿತು. ಅಮೇರಿಕಾದ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಅಧ್ಯಯನ ಮಾಡುವುದು ಒಂದು ರೋಮಾಂಚನ ಅನುಭವವಾಗಿತ್ತು. ವಿವಿಧ ದೇಶಗಳಿಂದ ಬಂದಿದ್ದ ಪ್ರತಿಭಾನ್ವಿತ ವಿದ್ಯಾರ್ಥಿಗಳು ಉತ್ಕೃಷ್ಟ ಮಟ್ಟದ ಗ್ರಂಥಾಲಯ ಮೊದಲಾದ ಸೌಲಭ್ಯಗಳು ನುರಿತ ವಿದ್ವಾಂಸರು, ವಿಷಯ ತಜ್ಞರ ಮಾರ್ಗದರ್ಶನ ಅವರ ಸಂಶೋಧನೆಗೆ ಉತ್ತಮ ಅವಕಾಶವನ್ನು ಕಲ್ಪಿಸಿತು. ನ್ಯೂಯಾರ್ಕ್‌ನಿಂದ ಮುಂದೆ ವಾಷಿಂಗ್‌ಟನ್ ಡಿ.ಸಿ.ಗೆ ಹೋಗಿ ಸಂಶೋಧನೆ ಮುಂದುವರಿಸಿದರು. ಪ್ರಪಂಚದ ಅತ್ಯಂತ ದೊಡ್ಡ ಗ್ರಂಥಾಲಯ ಲೈಬ್ರರಿ ಆಪ್ ಕಾಂಗ್ರೇಸ್ ಮತ್ತು ರಾಷ್ಟ್ರಿಯ ಪತ್ರಾಗಾರದಲ್ಲಿ ಸುಮಾರು ಒಂದು ವರ್ಷಗಳ ಕಾಲ ಅಧ್ಯಯನ ನಡೆಸಿದರು. ಈ ನಡುವೆ ಅಮೇರಿಕಾದ ಯೇಲ್ ವಿಶ್ವವಿದ್ಯಾನಿಲಯ, ಫಿಲಿಡೆಲ್ಫಿಯಾ ವಿಶ್ವವಿದ್ಯಾನಿಲಯ, ಹಾರ್ವರ್ಡ್ ವಿಶ್ವವಿದ್ಯಾನಿಲಯಗಲಲ್ಲೂ ಅಧ್ಯಯನವನ್ನು

ಮಾಡಿದರು. ಅಮೇರಿಕಾದ ಅತ್ಯಂತ ಪ್ರತಿಷ್ಠಿತ ವಿದ್ಯಾಲಯಗಳು, ಗ್ರಂಥಾಲಯಗಳಲ್ಲಿ ಅಧ್ಯಯನ ನಡೆಸಿ ಅಲ್ಲಿ ತಮ್ಮ ಸಂಶೋಧನೆಗೆ ಬೇಕಾದ ಮಾಹಿತಿಯನ್ನು ಸಂಗ್ರಹಿಸಿದ ನಂತರ ಅಮೇರಿಕಾದ ಕೆಲವು ನುರಿತ ಪ್ರಾಧ್ಯಾಪಕರನ್ನು ಭೇಟಿ ಮಾಡಿ ಅವರಿಂದ ಮೌಖಿಕ ಸಂದರ್ಶನದ ಮೂಲಕ ಮಾಹಿತಿ ಸಂಗ್ರಹಿಸಿದರು. ಅಮೇರಿಕಾ ಸರ್ಕಾರದ ಕೆಲವು ಉನ್ನತ ಅಧಿಕಾರಿಗಳನ್ನು ರಾಯಭಾರಿಗಳಿಂದ ಮಾಹಿತಿಯನ್ನು ಸಂಗ್ರಹಿಸಿದರು. ಒಟ್ಟಿನಲ್ಲಿ ಅಮೇರಿಕಾದಲ್ಲಿ ತಾವಿದ್ದ ಎರಡು ವರ್ಷಗಳಲ್ಲಿ ಪ್ರತಿದಿನ ಪ್ರತಿಕ್ಷಣ ಅಧ್ಯಯನ ಸಂದರ್ಶನ ವಿಚಾರ ವಿನಿಮಯಗಳ ಮೂಲಕ ಅಪಾರ ಮಾಹಿತಿ ಸಂಗ್ರಹ ಮಾಡಿ ಕೊಂಡರು ಈ ವಿದೇಶ ಅಧ್ಯಯನ ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿತು. ಕೊಲಂಬಿಯಾ, ಹಾರ್ವರ್ಡ್, ವಿಶ್ವವಿದ್ಯಾನಿಲಯಗಳ ವಿದ್ಯಾರ್ಥಿಗಳು ಕಠಿಣ ಅಭ್ಯಾಸದಲ್ಲಿ ತೊಡಗಿಕೊಂಡು ಉತ್ತಮ ಗ್ರೇಡ್, ಸ್ಥಾನ ಪದವಿಗಳನ್ನು ಗಳಿಸುತ್ತಿದ್ದದನ್ನೂ ಭಾರತಿಯ ವಿಶ್ವವಿದ್ಯಾನಿಲಯಗಳಿಗೆ ಮಾದರಿಯಾಗಿರಬೇಕು. ಉನ್ನತ ಶಿಕ್ಷಣಕ್ಕೆ ವಿದೇಶಗಳಲ್ಲಿ ಗೌರವ ಸ್ಥಾನವಿರುವುದನ್ನು ಗಮನಿಸಿದರು. ಅಮೇರಿಕಾದಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ಅಲ್ಲಿನ ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ಅಧ್ಯಾಪಕರಾಗಲು ಆಹ್ವಾನವೇನೋ ಬಂದಿತ್ತು. ಆದರೆ ತಾಯ್ನಾಡಿಗೆ ಮರಳಬೇಕು ತಮ್ಮ ವಿಶ್ವವಿದ್ಯಾನಿಲಯ ಬೋಧನೆಗೆ ತಮ್ಮಲ್ಲಿ ವಿದ್ವತ್ತು ಅನುಭವವನ್ನು ಮೀಸಲಿಡಬೇಕು. ಕರ್ನಾಟಕದ ವಿದ್ಯಾಸಂಸ್ಥೆಗಳಲ್ಲಿ. ಶಿಕ್ಷಣ ಮತ್ತು ಸಂಶೋಧನೆಯ ಮಹತ್ವವನ್ನು ಹೆಚ್ಚಿಸಬೇಕು ಎಂಬೆಲ್ಲಾ ಕನಸುಗಳನ್ನು ಹೊತ್ತು ಭಾರತಕ್ಕೆ ಮರಳಿದರು. ಅಮೇರಿಕಾದಿಂದ ಹಿಂದಿರುಗುವಾಗ ಎಲೆಕ್ಟ್ರಾನಿಕ್ ವಸ್ತುಗಳು, ಬಟ್ಟೆ ನೂತನ ರೀತಿಯ ಪಾತ್ರೆ ಯಂತ್ರಗಳನ್ನು ಕೊಂಡುತರುವುದರ ಬದಲು, ಎಂ.ವಿ. ಶ್ರೀನಿವಾಸರವರು ಪುಸ್ತಕ, ಪತ್ರಿಕೆ, ಪೋಟೋ ಮೈಕ್ರೋಫಿಲ್ಮ್ ಮೊದಲಾದ ಸಂಶೋಧನೆಗೆ ಅಗತ್ಯವಾದ ವಸ್ತುಗಳನ್ನು ಮಾತ್ರ ತಂದರು. ಅಮೇರಿಕಾದಲ್ಲಿದ್ದ ಪರಿಚಿತರಾದ ಪ್ರಾಧ್ಯಪಕರಿಂದ ಸಾಲಪಡೆದುಕೊಂಡು ಪುಸ್ತಕಗಳನ್ನು ಕೊಂಡುಕೊಂಡುಬಂದರು. ಭಾರತಕ್ಕೆ ಬಂದ ಮೇಲೆ ಅವುಗಳನ್ನು ಅಧ್ಯಯನ ಮಾಡಿ ಸಂಶೋಧನಾ ಲೇಖನಗಳನ್ನು ಬರೆದು ಮೇಲಿಂದ ಮೇಲೆ ಪ್ರಕಟಿಸಿದರು.

ಅಮೇರಿಕದಿಂದ ಭಾರತಕ್ಕೆ ಬರುವ ಮುನ್ನ ಶ್ರೀನಿವಾಸರವರು ಲಂಡನ್ನಿನ ಪ್ರಸಿದ್ಧ ಪತ್ರಗಾರ ಇಂಡಿಯಾ ಹೌಸ್ ಲೈಬ್ರರಿಯಲ್ಲಿನ ದಾಖಲೆಗಳನ್ನು ಒಂದು ತಿಂಗಳುಗಳ ಕಾಲ ಅಧ್ಯಯನ ಮಾಡಿದರು. ಮೈಸೂರು ಇತಿಹಾಸ ಸ್ವಾತಂತ್ರ್ಯ ಸಂಗ್ರಾಮ, ಕೊಡಗಿನ ಇತಿಹಾಸಕ್ಕೆ ಸಂಬಂಧಿಸಿದಂತೆ ಅಮೂಲ್ಯವಾದ ಮಾಹಿತಿಗಳನ್ನು ಲಂಡನ್ನಿನ ಲೈಬ್ರರಿ ಮತ್ತು ಬ್ರೀಟಿಷ್ ಮ್ಯೂಸಿಯಂನಲ್ಲೂ ಸಂಗ್ರಹಿಸಿಕೊಂಡರು. ಅನಂತರ ಯೋರೋಪ್, ಪ್ರವಾಸ ಕೈಗೊಂಡು ಪ್ಯಾರಿಸ್, ರೋಮ್, ಅಥೆನ್ಸ್, ಬರ್ಲಿನ್, ಫ್ರಾಂಕಫರ್ಟ್, ಕೈರೋ. ಟೆಹರಾನ್ ಬಾಗ್ದಾದ್ ಮೊದಲಾದ ನಗರಗಳಿಗೆ ಭೇಟಿ ನೀಡಿ ಅಲ್ಲಿನ ಸ್ಮಾರಕಗಳು ವಸ್ತು ಸಂಗ್ರಹಾಲಯಗಳನ್ನು ವೀಕ್ಷಿಸಿದರು. ಅವುಗಳ ಚಿತ್ರಗಳನ್ನು ತೆಗೆದುಕೊಂಡು ಬಂದರು. ಇಲ್ಲಿನ ವಿದ್ಯಾರ್ಥಿಗಳಿಗೆ ಸಂಶೋಧಕರಿಗೆ, ಸಹಪಾಠಿಗಳಿಗೆ ತೋರಿಸಿ ಪ್ರಶಂಸೆಗೆ ಒಳಗಾದರು.

# ಅಧ್ಯಾಯ –4
# ಎಂ.ವಿ.ಶ್ರೀನಿವಾಸರವರು ರಚಿಸಿದ ಗ್ರಂಥಗಳು

**ಬರಹಗಾರರಾಗಿ ಎಂ.ವಿ.ಶ್ರೀನಿವಾಸರವರು :-**

ಎಂ.ವಿ.ಶ್ರೀನಿವಾಸರವರು ಹುಟ್ಟು ಬರಹಗಾರರು ಚಿಕ್ಕ ವಯಸ್ಸಿನಿಂದಲೂ ಸಾಹಿತ್ಯದಲ್ಲಿ ಬರವಣಿಗೆಯಲ್ಲಿ ಅವರು ವಿಶೇಷ ಆಸಕ್ತಿಯನ್ನು, ಶ್ರದ್ದೆಯನ್ನು ಬೆಳೆಸಿಕೊಂಡಿದ್ದರು ಪ್ರಾಥಮಿಕ ಮತ್ತು ಮಾಧ್ಯಮಿಕ ತರಗತಿಗಳಲ್ಲಿ ಓದುತ್ತಿರುವಾಗಲೇ ಕನ್ನಡದ ಶ್ರೇಷ್ಠಗ್ರಂಥಗಳ ಬಗ್ಗೆ ಕುತೂಹಲ ಶ್ರದ್ಧೆಯಿಂದ ಅವಕಾಶ ಸಿಕ್ಕಿದಾಗ ಅಭ್ಯಾಸ ಮಾಡುವ ಪದ್ದತಿಯನ್ನು ಇಟ್ಟುಕೊಂಡಿದ್ದರು. ಮಾಧ್ಯಮಿಕ ಶಾಲೆಯಲ್ಲಿ ಓದುತ್ತಿರುವ ವೇಳೆಗೆ ಅವರು ಕಾವ್ಯ ರಚನೆಗೆ ಕೈಹಾಕಿದ್ದರು ಇವರು ಆಗ ಒಂದು ಕವನವನ್ನು ರಚಿಸಿ ಅದನ್ನು ಯಾರಿಗೂ ತೋರಿಸದೆ ಗುಟ್ಟಾಗಿ ತಮ್ಮ ಬಳಿ ಇಟ್ಟುಕೊಂಡಿದ್ದರು ಇವರ ಸಹಪಾಠಿಗಳು ಉಪಧ್ಯಾಯರಿಗೆ ಈತ ಏನನ್ನು ಬರೆದು ತಮ್ಮ ಜೇಬಿನಲ್ಲಿ ಇಟ್ಟುಕೊಂಡಿದ್ದಾನೆ. ಎಂದು ದೂರು ಹೇಳಿದರು ಉಪಾಧ್ಯಾಯರು ವಿದ್ಯಾರ್ಥಿಯನ್ನು ಕರೆದು ಅವನ ಜೇಬಿನಲ್ಲಿದ್ದ ಕವನವನ್ನು ತೆಗೆದು ಓದಿದರು. ಅವರಿಗೆ ಆಶ್ಚರ್ಯವಾಯಿತು ಇದು ತಮ್ಮ ವಿದ್ಯಾರ್ಥಿ ಬರೆದಿದ್ದಾನೆಂದು ನಂಬಲು ಕಷ್ಟವಾಯಿತು "ನಿಜಹೇಳು ಇದನ್ನು ಯಾರು ಬರೆದುಕೊಟ್ಟರು ಎಂದು ಗದರಿಸಿ ಕೇಳಿದರು. ಯಾರು ಬರೆದುಕೊಡಲು ಸಾದ್ಯ? ಅವರ ತಂದೆ ತಾಯಿಗಳಿಬ್ಬರು ಬರೆಯುವ ಸಾಮರ್ಥ್ಯವಿದ್ದವರಲ್ಲ ತಾನೇ ಬರೆದೆ ಎಂದು ಗಟ್ಟಿಯಾಗಿ ಹೇಳಲು ಧೈರ್ಯ ಸಾಲದು. ಹೀಗಾಗಿ ಅವರು ಸಾಹಿತ್ಯರಚನೆಯನ್ನು ಸ್ವಲ್ಪ ಕಾಲ ಮುಂದೂಡಬೇಕಾಯಿತು[1]. ಹೈಸ್ಕೂಲು ತರಗತಿಗೆ ಬರುವ ವೇಳೆಗೆ ಇವರು ಕವನಗಳಲ್ಲದೆ ಕಥೆ ಹಾಸ್ಯ ಲೇಖನಗಳನ್ನು ಬರೆಯಲಾರಂಭಿಸಿದ್ದರು ಆದರೆ ಅವುಗಳನ್ನು ಹೇಗೆ ಎಲ್ಲಿ ಪ್ರಕಟಿಸಬೇಕೆಂದು ತಿಳಿಯದೆ ತಮ್ಮ ಬಳಿಯೇ ಇಟ್ಟುಕೊಂಡಿದ್ದರು. ಅದೇ ಸಮಯದಲ್ಲಿಯೇ ತಮ್ಮ ಊರಿನಲ್ಲಯೇ ಒಂದು ಗ್ರಾಮವಾಣಿ ಎಂಬ ಹಸ್ತಪ್ರತಿಯ ಮಾಸ ಪತ್ರಿಕೆಯನ್ನು ಪ್ರಾರಂಭಿಸಿ ಅದರಲ್ಲಿ ಇವರ ಲೇಖನಗಳನ್ನು ಕಥೆಗಳನ್ನು ಪ್ರಕಟಿಸಿದರು[2]. ಆನರ್ಸ್ ತರಗತಿಯಲ್ಲಿ ಓದುತ್ತಿದ್ದಾಗ ಪ್ರಜಾಮತ, ದೀಪವಾಳಿ ಸಂಚಿಕೆಯಲ್ಲಿ ಇವರು ಬರೆದ ಒಂದು ಕವನ ಪ್ರಕಟವಾಯಿತು. ಪ್ರಪ್ರಥಮಬಾರಿಗೆ ತಮ್ಮ ಸಾಹಿತ್ಯ ರಚನೆಯನ್ನು ಮುದ್ರಣದಲ್ಲಿ ಕಂಡಾಗ ರೋಮಾಂಚನ ಉಂಟಾಯಿತು. ಆದರೆ ಕೆಲವು ದಿನಗಳಲ್ಲಿ ಈ ಸಂಚಿಕೆಯನ್ನು ದಿನಪತ್ರಿಕೆಯೆಂದು ವಿಮರ್ಶೆಮಾಡಿ ಶ್ರೀನಿವಾಸರು ಬರೆದ ಕವನವನ್ನು ಪಶಂಸಿಸಿತು[3]. ಇದರಿಂದ ಮತ್ತಷ್ಟು ಸಂತೋಷವಾದರೂ ನಾಡಿನ ಹಿರಿಯ ಕವಿಗಳ ರಚನೆಗಳೊಂದಿಗೆ ತಮ್ಮ ಕಾವ್ಯವನ್ನು ಹೊಗಳಿರುವುದು ಬಹಳಷ್ಟು ಸಂಕೋಚವನ್ನು ಗಾಬರಿಯನ್ನುಂಟು ಮಾಡಿತು. ಆದರೆ ಅವರು ಸಾಹಿತ್ಯ ಲೋಕಕ್ಕೆ ಪಾದಾರ್ಪಣೆ ಮಾಡಿದ್ದಾಗಿದ್ದಿತು. ಇನ್ನು ಮುಂದೆ ಸಾಗಬೇಕು. ದಾರಿ ಸುಲಭವಾದುದಲ್ಲ. ಆದರೆ ಸಾಗಲೇಬೇಕು. ಎಂ.ವಿ.ಶ್ರೀನಿವಾಸರವರು ತಮ್ಮ ಪ್ರಾರಂಭದ ದಿನಗಳಲ್ಲಿ ಕೆಲವು ವಾರ್ಷಿಕ ಸಂಚಿಕೆಗಳನ್ನು ಪ್ರಕಟಿಸುವುದರ ಮೂಲಕ ತಮ್ಮ ಸಾಹಿತ್ಯಾಭಿರುಚಿಯನ್ನು ವ್ಯಕ್ತಪಡಿಸಿದರು. 1956ರಲ್ಲಿ ವಿದ್ಯಾರ್ಥಿ ನಿಲಯದ ಆರಂಭೋತ್ಸವದ ಅಂಗವಾಗಿ ಜ್ಯೋತಿ ಎಂಬ ವಿಶೇಷ ಸಂಚಿಕೆಯನ್ನು ಹೊರತಂದರು ಇದರಲ್ಲಿ ಇವರು ತಮ್ಮ ಕವನ ಹಾಗೂ ಲೇಖನಗಳನ್ನು ಪ್ರಕಟಿಸಿದ್ದಲ್ಲದೆ ಇತರ ವಿದ್ಯಾರ್ಥಿಗಳು. ಲೇಖನ ಬರೆಯುವಂತೆ ಒತ್ತಾಯಪಡಿಸಿ ಅವರು ಬರೆಯುವಂತೆ ಮಾಡಿದರು. ಅವುಗಳನ್ನು ತಿದ್ದಿ ಪರೀಕ್ಷಿಸಿ ಒಂದು ಸುಂದರವಾದ ಸಂಚಿಕೆಯಾಗಿ ಹೊರತಂದರು ಇದರಿಂದ ಅನೇಕ

ವಿದ್ಯಾರ್ಥಿಗಳಲ್ಲಿದ್ದ ಸೂಕ್ತ ಪ್ರತಿಭೆ ಹೊರ ಬರುವುದಕ್ಕೆ ಅವಕಾಶದೊರಕಿತು. ಅದೇ ರೀತಿಯಲ್ಲಿಯೇ ಚಿಕ್ಕಮಗಳೂರು ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದಾಗ ಮಧುಕರ ಎಂಬ ಒಂದು ವಾರ್ಷಿಕ ಸಂಚಿಕೆಯನ್ನು ಹೊರ ತಂದರು[4]. ಕೆಲವು ವಿದ್ಯಾರ್ಥಿಗಳನ್ನು ಕರೆದು ಅವರಿಂದ ಲೇಖನ ಬರೆಸಿ ಅದನ್ನು ಸಾಕಷ್ಟು ತಿದ್ದಿ ಒಳ್ಳೆಯ ಲೇಖನವನ್ನಾಗಿ ಮಾಡಿ ಸಂಚಿಕೆಯಲ್ಲಿ ಪ್ರಕಟಿಸಿದರು. ಮುಂದೆ ಈ ವಿದ್ಯಾರ್ಥಿಗಳು ಕರ್ನಾಟಕದ ಪ್ರಸಿದ್ಧ ಲೇಖಕರಾಗಿ ತಮ್ಮ ಗುರುಗಳು ನೀಡಿದ ಮಾರ್ಗ ದರ್ಶನವನ್ನು ಸದಾ ಸ್ಮರಿಸಿಕೊಳ್ಳುತ್ತಾರೆ. ಇದೇ ರೀತಿಯಲ್ಲಿ ಸಿಂದನೂರು ಕಾಲೇಜಿನಲ್ಲಿ ಸಿಂಧೂರ ಎಂದು ವಾರ್ಷಿಕ ಸಂಚಿಕೆಯನ್ನು ಪ್ರಕಟಿಸಲು ಮುಂದಾದಾಗ ಅಲ್ಲಿನ ವಿದ್ಯಾರ್ಥಿ ಅಧ್ಯಾಪಕರುಗಳು ನಮ್ಮಲ್ಲಿ ಲೇಖನ ಬರೆಯುವವರೇ ಇಲ್ಲ ಪತ್ರಿಕೆ ಪ್ರಕಟಿಸಲು ನಮ್ಮಿಂದ ಸಾದ್ಯವಾಗದು ಎಂಬ ನಿರುತ್ಸಾಹ ಸಪ್ರತಿಭಾವಂತ ವಿದ್ಯಾರ್ಥಿಗಳನ್ನು ಗುರುತಿಸುವುದರಲ್ಲಿ ಶ್ರೀನಿವಾಸರಿಗೆ ನೈಪುಣ್ಯತೆಯಿದ್ದಿತು. ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಲೇಖನ ಬರೆಯುವ ಅಭ್ಯಾಸವನ್ನು ಕಲಿಸಿಕೊಟ್ಟರು. ಈ ಲೇಖನಗಳೆಲ್ಲ ಸಂಚಿಕೆಯಾಗಿ ಪ್ರಕಟಿಸಿದಾಗ ವಿದ್ಯಾರ್ಥಿಗಳಿಗೆ ಪೋಷಕರಿಗೆ ಸಂತೋಷ ಸಮಾಧಾನ ಲಭಿಸಿತು.[6]

ಈಗಾಗಲೇ ತಿಳಿಸಿರುವಂತೆ ಎಂ.ವಿ. ಶ್ರೀನಿವಾಸರವರು ಇತಿಹಾಸ, ಸಾಹಿತ್ಯ ಎರಡು ಕ್ಷೇತ್ರಗಳಲ್ಲಿ ಕೃಷಿ ಮಾಡಿ ಸಾಕಷ್ಟು ಗ್ರಂಥಗಳನ್ನು ರಚಿಸಿದರು. ಅವರು ಇತಿಹಾಸದ ಅಭ್ಯಾಸದಲ್ಲಿ ತೊಡಗಿದ್ದಾಗ ಅನೇಕ ಪ್ರಸಿದ್ದ ವ್ಯಕಿಗಳ ಮತ್ತು ಘಟನೆಗಳ ಬಗ್ಗೆ ಅಭ್ಯಾಸ ಮಾಡುತ್ತಿದ್ದಾಗ ಅವುಗಳನ್ನು ಕುರಿತು ಸಾಹಿತ್ಯ ಗ್ರಂಥಗಳನ್ನು ಬರೆಯಬಹುದನ್ನಿಸಿದ್ದಿತು. ಇಂತಹ ಆಲೋಚನೆಯ ಫಲವಾಗಿ ಹೊರ ಬಂದ ಕೃತಿಯೆ ಮಸ್ತಾನಿ. ಎಂ.ಎ ತರಗತಿಯಲ್ಲಿ ಮರಾಠ ಇತಿಹಾಸವನ್ನು ಅಭ್ಯಾಸ ಮಾಡುತ್ತಿದ್ದಾಗ ಅಲ್ಲಿ ಕಂಡುಬರುವ ಬಾಜಿರಾವ್ ಮಸ್ತಾನಿ ಪ್ರಕರಣವನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿದರು. ಈ ಉದ್ದೇಶಕ್ಕಾಗಿ ಮಹಾರಾಷ್ಟ್ರದ ಅನೇಕ ಕಡೆ ಕ್ಷೇತ್ರ ಕಾರ್ಯವನ್ನು ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಿದರು. ಈ ಸಂದರ್ಭದಲ್ಲಿ ಅವರು ಪುಣೆಯಲ್ಲಿದ್ದ ಭಾರತೀಯ ಇತಿಹಾಸ ಸಂಶೋಧನಾ ಮಂಡಲದಲ್ಲಿ ಗ್ರಂಥಗಳನ್ನು ಅಪ್ರಕಟಿತ ದಪ್ತರ್ ಮೊದಲಾದ ದಾಖಲೆಗಳನ್ನು ಪರಿಶೀಲಿಸಿದರು ಈ ಎಲ್ಲಾ ಸಾಮಗ್ರಿಗಳನ್ನು ಬಳಸಿಕೊಂಡು ಅವರು ಬರೆದ ಐತಿಹಾಸಕ ಕಾದಂಬರಿ "ಮಸ್ತಾನಿ" ಶ್ರೀನಿವಾಸರವರಿಗೆ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಸ್ಥಾನವನ್ನು ತಂದುಕೊಟ್ಟಿತು.[7]

**ಮಸ್ತಾನಿಯನ್ನು ಕುರಿತ ವಿಮರ್ಶೆ ಮತ್ತು ಪರಿಚಯ**

**ಮಸ್ತಾನಿ ಕಾದಂಬರಿಯನ್ನು ಕುರಿತ ಪತ್ರಿಕಾಭಿಪ್ರಾಯಗಳು:-**

**ಪ್ರಶಂಸನೀಯ ಪ್ರಯತ್ನ**

ಪೆಷ್ವೇಬಾಜಿರಾಯನ ವ್ಯಕ್ತಿತ್ವಕ್ಕೆ ಸಂಬಂಧಿಸಿದ ಕಾದಂಬರಿ ಇದು ಇತಿಹಾಸದ ಅಭ್ಯಾಸವನ್ನೇ ಮಾಡದ ಲೇಖಕರು ಕಾದಂಬರಿಗಾಗಿಯೇ ಅನೇಕ ಆಧಾರಗಳನ್ನು ನೋಡಿಕೊಂಡು ಬಂದಿದ್ದಾರೆ. ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು ಇಲ್ಲವೇ ಎಲ್ಲ ಎನ್ನುವಾಗ ಇಂತಹ ಪರಿಶ್ರಮ ಪೂರಕ ಮತ್ತು ಪ್ರಾಮಾಣಿಕ ಪ್ರಯತ್ನಕ್ಕೆ ಸ್ವಾಗತವಿದೆ. ಕತೆ ಮೆಚ್ಚತಕ್ಕಂತಹುದು ಲೇಖಕರು ದೊರಕಿಸಿದ ಚಾರಿತ್ರಿಕ ವಿವರಗಳು ಕತೆಗೆ ಜೀವಕಳೆಯನ್ನು ಒದಗಿಸುತ್ತವೆ. ಬಾಜಿರಾಯನ ಶ್ರೇಷ್ಠ ವ್ಯಕ್ತಿತ್ವ ವಾಚಕರನ್ನು ದಂಗುಗೊಳಿಸುವಂತಹುದು. ಕೊನೆಯದಾಗಿ ಮಸ್ತಾನಿಯು ಜಾತಿ, ಮತ,

ಪಂಥಗಳನ್ನು ಮೀರಿ ವಾಚಕರ ಸಹೃದಯತೆಯನ್ನು ದೊರಕಿಸಿಕೊಳ್ಳುವಂತಹುದು. ಒಳ್ಳೆಯ ಐತಿಹಾಸಿಕ ಕಾದಂಬರಿಗಳನ್ನು ನಮಗೆ ಒದಗಿಸುವ ಶಕ್ತಿ ಶ್ರೀನಿವಾಸ್ ರಲ್ಲಿದೆ.

ಏಳು ವರ್ಷಗಳ ಅಧ್ಯಯನ ಮತ್ತು ಸಂಶೋಧನೆಗಳ ಫಲವಾಗಿ ರೂಪಗೊಂಡಿರುವ ಈ ಕೃತಿಯಲ್ಲಿ ಮಹಾರಾಷ್ಟ್ರ ಸಾಮ್ರಾಜ್ಯದಲ್ಲಿನ ಜನ ಜೀವನ ಬಾಜೀರಾಯನ ಕ್ರಾಂತಿಕಾರಕ ಸಾಹಸಿಕೃತ್ಯಗಳು[11]. ಅವನ ವಿರಹ ಮಿತಿಮೀರಿದ ಕುಡಿತ ಮತ್ತು ಅವನ ಮತ್ತು ಮಸ್ತಾನಿಯ ಹೃದಯ ವಿದ್ರಾವಕ ಅಂತ್ಯ ಇತ್ಯಾದಿ ಚಾರಿತ್ರಿಕ ಕಠೋರ ಸತ್ಯಗಳು ಕಲಾತ್ಮಕವಾಗಿ ಚಿತ್ರಿಸಲ್ಪಟ್ಟಿವೆ. ನಾರಿ ಸೌಂದರ್ಯ ತನ್ನ ಅದ್ಭುತ ಪ್ರಭಾವೋತ್ಪಾದನಾ ಶಕ್ತಿಯನ್ನು ನಾಡಿನ ಅಳಿವು ಉಳಿವುಗಳಿಗೆ ಯಾವ ರೀತಿ ಸಹಾಯಕ ಬಲ್ಲುದು ಎಂಬ ವಿಚಾರ ಈ ಹೊತ್ತಿಗೆಯಲ್ಲಿ ಸ್ಪುಟವಾಗಿ ಚಿತ್ರಿಸಲ್ಪಟ್ಟಿದೆ. ಇದು ಸರ್ವರೂ ಸಂಗ್ರಹಿಸಿಬೇಕಾದ ಹೊತ್ತಿಗೆ.

ಇದೊಂದು ಐತಿಹಾಸಿಕ ಕಾದಂಬರಿ ಪೇಶ್ವೆಬಾಜಿರಾಯನ ಜ್ವಲಂತ ಜೀವನಕ್ಕೆ ಸಂಬಂಧಿಸಿದುದು. ಮಸ್ತಾನಿ ಆ ಜೀವನದಲ್ಲಿ ಪಾಲ್ಗೊಂಡು ಅದನ್ನು ಅಲ್ಲೋಲ ಎಬ್ಬಿಸಿದ ರೋಮಾಂಚಕ ಕಾದಂಬರಿ ಇದು ಐತಿಹಾಸಿಕ ಕಾದಂಬರಿಯು ಕಾಗಕ್ಕ ಗುಬ್ಬಕ್ಕನ ಕತೆಯಲ್ಲ. ಐತಿಹಾಸಿಕ ಘಟನೆಗಳು ವ್ಯಕ್ತಿಗಳು ಅಲ್ಲದದಾರೆ. ದಪ್ತರುಗಳಲ್ಲಿ ನಿರ್ಜೀವವಾಗಿ ಹುದುಗಿರುವವರಿಗೆ ಸಂಜೀವನಿ ಸಿಂಪಡಿಸಿ ಅವರನ್ನೂ ಜೀವಂತರನ್ನಾಗಿ ಮಾಡುವ ಐತಿಹಾಸಿಕ ಕಾದಂಬರಿ.

ಮಸ್ತಾನಿಯ ಬಗ್ಗೆ ಐತಿಹಾಸಿಕ ಉಲ್ಲೇಖಗಳನ್ನು ಆಯ್ದು ಶ್ರೀ ಎಂ.ವಿ.ಶ್ರೀನಿವಾಸ್ ಅವರು ದಿವ್ಯವಾದ ಕಾದಂಬರಿ ಹೆಣೆದಿದ್ದಾರೆ. ನಿಜಕ್ಕೂ ಅವರ ಏಳುವರ್ಷಗಳ ಶ್ರಮ ಸಾರ್ಥಕವಾಗಿದೆಯೆಂದು ಧಾರಾಳವಾಗಿ ಹೇಳಬಹುದು.

ಇದು ಶ್ರೀ ಎಂ.ವಿ.ಶ್ರೀನಿವಾಸರ ಎರಡನೆಯ ಐತಿಹಾಸಿಕ ಕಾದಂಬರಿ ಶ್ರೀನಿವಾಸ ಅವರು ನುರಿತ ಬರಹಾಗಾರರು. ಐತಿಹಾಸಿಕ ಘಟನೆಗಳನ್ನು ಅಳವಡಿಸಿಕೊಂಡು ಉತ್ತಮ ಕಾದಂಬರಿಗಳನ್ನು ಸೃಜಿಸುವ ನಿಷ್ಠಾವಂತರಲ್ಲಿ ಶ್ರೀನಿವಾಸರೂ ಒಬ್ಬರು. ಇವರ ರತ್ನಾಕರ ಕಾದಂಬರಿ ಸಾಕಷ್ಟು ಜನರ ಮನಸ್ಸನ್ನು ಸೆಳೆದಿದೆ. ಕಥಾನಾಯಕ ಸುತ್ತ ಸಮನ್ವಯ ಪೋಷಕ ಪಾತ್ರಗಳನ್ನು ಸೃಜಿಸಿ ನಾಯಕ–ನಾಯಕಿಯರ ಉದಾತ್ತಗುಣ ಮನೋಭೀಷ್ಟಟಗಳಿಗೆ ಕುಂದು ಬಾರದೆ, ಐತಿಹಾಸಿಕ ಸಂಗತಿಗಳಿಗೆ ಅಪಚಾರವೆಸಗದೆ ಉತ್ತಮ ಕಾದಂಬರಿಗಳನ್ನು ಸೃಜಿಸುವ ಕಾರ್ಯ ಸ್ವಾತಂತ್ರ ಕಾದಂಬರಿ ರಚನಗಿಂತ ಕಷ್ಟಕರವಾದುದು. ಪ್ರಸ್ತುತ ಕಾದಂಬರಿ "ಮಸ್ತಾನಿ" ಯಲ್ಲಿ ಕೆಲವು ಸಣ್ಣಪುಟ್ಟ ದೋಷಗಳಿದ್ದರೂ, ಶ್ರೀಯತರು ಕಾದಂಬರಿ ಸೃಷ್ಠಿಯಲ್ಲಿ ಯಶಸ್ವಿಯಾಗಿದ್ದಾರೆ. ಮುಂದೆ ಉತ್ತಮ ಕಾದಂಬರಿಗಳನ್ನು ಸತತ ಅಭ್ಯಾಸ ಸಾಧನೆಗಳಿಂದ ಕೊಡಬಲ್ಲರೆಂಬ ಕುರುಹನ್ನು ಶ್ರೀನಿವಾಸರು ತೋರಿಸಿದ್ದಾರೆ.

ಈ ಕಾದಂಬರಿಯ ರಚನೆಗೆ ಲೇಖಕರು ಏಳು ವರ್ಷಗಳಷ್ಟು ಧೀರ್ಘಕಾಲದ ಸಂಶೋಧನೆ ನಡೆಸಿದ್ದಾರೆ. ಸಾಮಾನ್ಯವಾಗಿ ಚಾರಿತ್ರಿಕ ಕಾದಂಬರಿಗಳಲ್ಲಿ ಬೇಸರ ತರುವಂತಹ ನೀರಸ ಪ್ರಕರಣಗಳನ್ನೇ ನಿರೀಕ್ಷಿಸಬಹುದು. ಈ ಕಾದಂಬರಿಯಲ್ಲಿ ನೀರಸತೆಗೆ ಎಡೆಯಿಲ್ಲದಿರುವುದೇ

ವೈಶಿಷ್ಟ್ಯವಾಗಿದೆ. ಇಲ್ಲೂ ರಾಜಕೀಯ ಸನ್ನಿವೇಶಗಳಿವೆ. ಯುದ್ಧ ಪ್ರಸಂಗಗಳಿವೆ. ಸಂಸಾರಿಕ ಒಡಕುತೊಡಕುಗಳಿವೆ. ಗುರು ಜನರ ಹಿತೋಪದೇಶಗಳಿವೆ. ಆದರೆ ಇವೆಲ್ಲ ಔಚಿತ್ಯವರಿತು ಹಿತಮಿತವಾಗಿ ಬಂದಿದೆ. ಚಾರಿತ್ರಿಕ ಅಂಶಗಳಿಂದ ಪೋಷಿತವಾಗಿದ್ದರೂ ಬಾಜಿರಾಯ ಮಸ್ತಾನಿಯರ ನಿರ್ಮಲ ಪ್ರೇಮ ಚಿತ್ರಣ ಮನೋಜ್ಞವಾಗಿದೆ. ತಮ್ಮದೇ ಆದ ಜೋಡಣೆ ಪಾತ್ರೋಚಿತವಾದವು. ಸಂಭಾಷಣೆ ಎಲ್ಲ ರಮ್ಯ ಸಂಭಾಷಣೆ ಸುಂದರವಾಗಿರುವಷ್ಟೇ ಗಂಭೀರ ಮಸ್ತಾನಿ ತನ್ನ ಪಾತ್ರದ ಭವ್ಯತೆಯಿಂದ ಕಾದಂಬರಿಯ ಶೋಭೆಗೆ ಕಾರಣಳಾಗಿದ್ದಾಳೆ. ಮಿಂಚಿನಂತೆ ಮಿನುಗಿದ್ದಾಳೆ. ಮಹಾರಾಷ್ಟ್ರದಲ್ಲಿ ಜನಪ್ರಿಯವಾಗಿರುವ ಈ ಪ್ರಣಯ ಕಥೆಯನ್ನು ಚಿತ್ರಿಸಿ, ಈ ಕಾದಂಬರಿಯ ಲೇಖಕರು ತಮ್ಮ ಧೀರ್ಘ ಸಂಶೋಧನೆಯನ್ನು ಸಾರ್ಥಕ ಪಡಿಸಿದ್ದಾರೆಂದು ಹೇಳಬಹುದು.

ಯಾವುದೊಂದು ಕಾರ್ಯಸಿದ್ದಿಸಬೇಕಾದರೆ ಪ್ರಾಮಾಣಿಕ ಸೇವೆ ಅಮಿತ ಶ್ರದ್ದೆ ಅವಶ್ಯ ಆರ್ಥಿಕ ದೃಷ್ಟಿಯಿಂದಲೋ ಹೆಸರುಗಳಿಕೆಯ ದೃಷ್ಠಿಯಿಂದಲೋ ತೋಚಿದ್ದೇ ಬರೆದು ಸಾಹಿತ್ಯ ಎನ್ನುವ ಈ ಕಾಲದಲ್ಲಿ ಈ ಲೇಖಕರು ಸಂಯಮದಿಂದ, ಶ್ರದ್ದೆಯಿಂದ ಏಳು ವರ್ಷಗಳ ಪರಿಶ್ರಮದಿಂದ ಮಸ್ತಾನಿಯನ್ನು ರಚಿಸಿದ್ದಾರೆ. ಕೃತಿ ಓದಿ ಮುಗಿದಾಗ ಗ್ರಂಥಕರ್ತರ ಶ್ರಮ ಸಾರ್ಥಕವಾಯಿತು ಎಂಬ ಸಮಾಧಾನ ಮಾಡದೇ ಇರದು. ಕೃತಿ ಓದಿ ಮುಗಿದಾಗ ಅರಿವಾಗದೆಯೇ ನಮ್ಮ ಹೃದಯ ಹರ್ಷದಿಂದ ಅರಳುತ್ತದೆ. ಒಂದೊಂದು ಘಟನೆಯೂ ಅಚ್ಚಳಿಯದೆ ಮೂಡಿಬಿಡುತ್ತವೆ. ಮಸ್ತಾನಿಯ ಅಂತ್ಯ ಮನಸ್ಸಿನಲ್ಲಿ ಅಚ್ಚಳಿಯದೆ ಉಳಿದು ಬಿಡುತ್ತದೆ. ಕುರುಡ ಸಮಾಜದ ಕ್ರೂರ ನಿಂದೆಗೆ ಬಲಿಯಾದ ಭಾಜಿರಾಯನ ಮೂರ್ತಿ ಹೃದಯವನ್ನೇ ಕುಕ್ಕಿ ಬಿಡುತ್ತದೆ. ಪ್ರೌಢಭಾಷಾ ಸಂಪತ್ತು ನಿರರ್ಗಳವಾಗಿ ಕತೆ ಹೇಳಬಲ್ಲ ಚಾತುರ್ಯ ಲೇಖಕರಿಗೆ ಸಿದ್ದಿಸಿದೆ. ಒಟ್ಟಿನಲ್ಲಿ "ಮಸ್ತಾನಿ" ಯೋಗ್ಯಕೃತಿ ಸಂಗ್ರಹಿಸಲು ಅರ್ಹವಾದುದು.

**ತಾಯಿನಾಡು**

**ಮಸ್ತಾನಿ:–**

ಐತಿಹಾಸಿಕ ವಸ್ತುವನ್ನಾದರಿಸಿ ಕಾದಂಬರಿ ರಚಿಸಲು ಹೊರಟ ಲೇಖಕರು ಸಹಜವಾಗಿ ಒಂದು ಇಕ್ಕಟ್ಟಿನ ಪರಿಸ್ಥಿತಿಗೆ ಸಿಲುಕಿಕೊಳ್ಳುತ್ತಾರೆ. ಅವರ ಕೃತಿಯಲ್ಲಿ ಇತಿಹಾಸಕ್ಕೆ ಪ್ರಾಧ್ಯಾನ್ಯ ಕೊಟ್ಟರೆ ಕಲಾತ್ಮಕತೆ ಕಡಿಮೆಯಾಗಬಹುದು ಕಲೆಗೇ ಮಹತ್ವ–ವಿತ್ತಲ್ಲಿ, ಇತಿಹಾಸಕ್ಕೆ ಅಪಚಾರವಾಗಬಹುದು. ಉತ್ತಮ ಕಲಾಕೃತಿಗಳಾಗ ಬಹುದಾದ ಐತಿಹಾಸಿಕ ವಸ್ತುಗಳು ತೀರ ವಿರಳ.

'ಮಸ್ತಾನಿ' ಕಾದಂಬರಿಯ ಕಥಾವಸ್ತು, ಐತಿಹಾಸವಾಗಿದ್ದರೂ ಕಲಾತ್ಮಕ ವಾಗಬಲ್ಲ ಸಾಮಥ್ಯವನ್ನು ಹೊಂದಿದೆ. ಕಲಾತ್ಮಕವಾಗಿ ಮೂಡಿಬಂದಿದೆ. ಇತಿಹಾಸವನ್ನು ಸ್ವಲ್ಪವೂ ಬಿಡದೆ ಅನುಸರಿಸಿರುವುದರಿಂದಲೂ ಬಾಜೀರಾಯನಿಗೆ ಸಂಬಂಧಪಟ್ಟ ಘಟನೆಗಳು ಹೆಚ್ಚಾಗಿರುವುದರಿಂದ ಮಸ್ತಾನಿಯ ಪಾತ್ರ ಪುಷ್ಟಿಯನ್ನು ಕಡಿಮೆಮಾಡಿದೆ. ದಾಬಾಡೆಯ ಕಾಳಗ, ಸಿದ್ದಿಗಳ ಪ್ರಸಂಗ ರಾಧಾಬಾಯಿಯ ಕಾಶೀಯಾತ್ರೆ ಮೊದಲಾದವುಗಳನ್ನು ಇಲ್ಲಿ ಸ್ಮರಿಸಬಹುದು.

ಇಡೀ ಗ್ರಂಥದ ದೃಷ್ಟಿಯಿಂದ ಇದೊಂದು ಸಫಲ ಐತಿಹಾಸಿಕ ಕಾದಂಬರಿ. ಘಟನೆಗಳನ್ನು ಅನುಕ್ರಮವಾಗಿ ರಂಜನೀಯವಾಗಿ ಹೆಣೆದುಕೊಂಡು ಹೋಗಲಾಗಿದೆ. ಸರಳ ಶೈಲಿ ರೋಮಾಂಚಕ ಸನ್ನಿವೇಶಗಳಿಂದ ಕೂಡಿದ ಈ ಕಾದಂಬರಿ ಎಲ್ಲಿಯೂ ಬೇಸರತರಿಸದೆ. ಓದುಗರನ್ನು ಮುಕ್ತಾಯದವರೆಗೂ ಕರೆದೊಯ್ಯುತ್ತದೆ. ಬಾಜೀರಾಯನ ವ್ಯಕ್ತಿತ್ವ ಪರಾಕ್ರಮಗಳು ಚೆನ್ನಾಗಿ ಮೂಡಿ ಬಂದಿದೆ. ಕಾಶೀಬಾಯಿ, ಬಾಲಾಜಿ ಮೊದಲಾದ ಪಾತ್ರಗಳು ಅಲ್ಪಾವಕಾಶದಲ್ಲಿಯೂ ಓದುಗರ ಮೇಲೆ ಸ್ಪಷ್ಟ ಪ್ರಭಾವನ್ನು ಬೀರುತ್ತವೆ. ಬಿಗಿಯಾದ ಶೈಲಿ ಐತಿಹಾಸಿಕ ವಸ್ತುವನ್ನು ಚೆನ್ನಾಗಿ ನಿರೂಪಿಸಲು ಶಕ್ತವಾಗಿದೆ. ಅಂತ್ಯ ಕಾದಂಬರಿಗೆ ಸಹಜವಾಗಿದೆ.

ಎಂ.ವಿ.ಶ್ರೀನಿವಾಸರವರು ಬರೆದ ಅತ್ಯಂತ ಗಮನರ್ಹವಾದ ಐತಿಹಾಸಿಕ ಕೃತಿ ರತ್ನಾಕರ, ಇದನ್ನು ಅವರು ಪ್ರೊ.ಜಿ.ಬ್ರಹ್ಮಪ್ಪರೊಂದಿಗೆ ರಚಿಸಿದರು ಈ ಗ್ರಂಥಕ್ಕೂ ಕೂಡ ಅವರು ಉಪಲಬ್ದವಾಗಿದ್ದ ಸಾಹಿತ್ಯ ಆದಾರಗಳನ್ನು ಬಳಸಿಕೊಂಡಿದ್ದಲ್ಲದೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಾಕಷ್ಟು ಕ್ಷೇತ್ರ ಕಾರ್ಯವನ್ನು ಮಾಡಿ ಉಪಯುಕ್ತವಾದ ಮಾಹಿತಿಯನ್ನು ಸಂಗ್ರಹಿಸಿಕೊಂಡರು. 1961 ರಲ್ಲಿ ಪ್ರಕಟವಾದ ರತ್ನಾಕರ ಐತಿಹಾಸಿಕ ಕಾದಂಬರಿಗೆ ಮೈಸೂರು ಸರ್ಕಾರದ (ಸಾಹಿತ್ಯ ಆಕಾಡೆಮಿ) ಶ್ರೇಷ್ಠ ಕಾದಂಬರಿ ಪ್ರಶಸ್ತಿ ಲಭಿಸಿತು. ಮುಂದೆ ಈ ಗ್ರಂಥವು ತೆಲಗು, ಹಿಂದಿ, ಗುಜರಾತಿ ಭಾಷೆಗಳಿಗೆ ಅನುವಾದಗೊಂಡಿತು.

**ಡಾ.ಎಂ.ವಿ.ಶ್ರೀನಿವಾಸ್ ಅವರ ಗ್ರಂಥಗಳ ಬಗ್ಗೆ ಪತ್ರಿಕಾ ಅಭಿಪ್ರಾಯಗಳು**

**ರತ್ನಾಕರ (ಐತಿಹಾಸಿಕ ಕಾದಂಬರಿ)**

**ರತ್ನಾಕರ ವಿಮರ್ಶೆ**

ಕನ್ನಡ ಸಾಹಿತ್ಯ ಪರಿಚಯ ಮಾಡಿಕೊಂಡಿರುವವರಿಗೆ ರತ್ನಾಕರವರ್ಣಿ ಒಬ್ಬ ಮೆಚ್ಚಿನ ಕವಿಯೇ ಆಗಿರುತ್ತಾನೆ. ಅವನ ಉಜ್ವಲ ಕೃತಿ ಭರತೇಶವೈಭವ ಸರ್ವಜನಾದರಣೀಯವಾಗಿ ಮೆರೆದಿದೆ. ಇಂತದೊಂದು ಮಹಾಕಾವ್ಯವನ್ನು ಸರಳಶೈಲಿಯಲ್ಲಿ ಜಾನಪದ ದಾಟಿಯಲ್ಲಿ ಬರೆದಿರುವ ರತ್ನಾಕರನ ಬಗ್ಗೆ ಅವನದೆ ಕಾವ್ಯಗಳಿಂದ ತಿಳಿದು ಬರುವ ಅಂಶ ಅತ್ಯಲ್ಪ 18ನೇ ಶತಮಾನದಲ್ಲಿ ಬದುಕಿದ್ದ ದೇವ ಚಂದ್ರನೆಂಬುವನು ತನ್ನ ರಾಜಾವಳಿ ಕಥೆ ಎಂಬ ಗ್ರಂಥದಲ್ಲಿ ರತ್ನಾಕರ ವರ್ಣಿಯ ಬಗ್ಗೆ ಕೆಲವು ಸಂಗತಿಗಳನ್ನು ತಿಳಿಸಿದ್ದಾನೆ. ಇವನು ಹೇಳಿರುವ ಎಲ್ಲಾ ಸಂಗತಿಗಳನ್ನೂ ಸತ್ಯವೆಂದೂ ವಿದ್ವಾಂಸರು. ಒಪ್ಪಲಾದರೂ ಎಲ್ಲವೂ ಸುಳ್ಳೆಂದು ತ್ಯಜಿಸಿಯೂ ಇಲ್ಲ. ಅಂತೂ ಈ ಎಲ್ಲಾ ಸಾಮಗ್ರಿಗಳನ್ನು ಕಲೆ ಹಾಕಿ, ಅದರ ಆಧಾರದ ಮೇಲೆ ಹಲವು ಕಲ್ಪತಾಂಶಗಳನ್ನು ಸರಿಸಿ ರಚಿತವಾಗಿರುವ ಗ್ರಂಥ ರತ್ನಾಕರ. ಕಾದಂಬರಿಯ ರೀತಿಯಲ್ಲಿ ರಚಿತವಾಗಿರುವ ಈ ಕೃತಿ, ಆ ಮಹಾಕವಿಯ ಕುತೂಹಲ ಜನರ ಜೀವನ ಪರಿಚಯವನ್ನು ಕಲ್ಪಿತವಾಗಿಯೂ ಆಗಲೊಲ್ಲದೇಕೆ ಸ್ಥೂಲವಾಗಿ ಮಾಡಿಕೊಡಲು ಯತ್ನಿಸುತ್ತಿದೆ. ಮೂಡುಬಿದಿರೆಯಲ್ಲಿ ಜೈನ ಶ್ರಾವಕ ಮನೆತನದಲ್ಲಿ ಜನಿಸಿದ ರತ್ನಾಕರ ಬಾಲ್ಯದಲಿಯೇ ತೇಜಸ್ವಿಯಾಗಿದ್ದು ತಮ್ಮ ನೆರೆಯ ವೀರಶೈವ ಸಂಸಾರದೊಡನೆ ಬೆರೆತು ಬಾಳಿ ಸಮವಯಸ್ಸಿನ ಗಿರಿಜೆಯೊಡನೆ ಒಡನಾಡಿಕೊಂಡಿದ್ದ. ಪ್ರಕೃತಿ ಪ್ರೇಮವನ್ನು ಸಂಗೀತ ಪ್ರೇಮವನ್ನೂ ಬಾಲ್ಯದಲ್ಲೇ ಬೆಳೆಸಿಕೊಂಡು ವಿದ್ಯಾಭ್ಯಾಸದಲ್ಲಿ ತೊಡಗಿದ ಇವನಿಗೆ ಕಾವ್ಯ ಪ್ರೇಮ ಸಹಜವಾಗಿಯೇ ಉಂಟಾಗಿ ವ್ಯಾಕರಣ, ಛಂದಸ್ಸು, ಮೊದಲಾದವು ಹಿಡಿಸಿದಾದವು. ವಿದ್ಯಾರ್ಥಿದೆಸೆಯಲ್ಲಯೇ ಕಾವ್ಯರಚನೆಯಲ್ಲಿ ತೊಡಗಿ ನಿರಂಜನಸ್ತುತಿ, ಭರತೇಶ ವೈಭವದ

ಕೆಲಸಂಧಿಗಳನ್ನೂ ತ್ರಿಲೋಕ ಶತಕ ಮತ್ತು ಹಲವು ಶೃಂಗಾರ ಕವಿತೆಗಳನ್ನು ರಚಿಸಿದನು ಕ್ರಮೇಣ ಇವನ ಕೀರ್ತಿ ಕಾರ್ಕಳದ ಭೈರವ ಅರಸರಿಗೆ ಮುಟ್ಟಲು ಅವರೂ ಸಹ ಇವನ ಕಾವ್ಯಗಳನ್ನು ಓದಿಸಿ ಕೇಳಿ ಮೆಚ್ಚಿಸಿಕೊಂಡು ಆಸ್ಥಾನದಲ್ಲಯೇ ಇರಿಸಿಕೊಂಡರು. ರಾಜಕುವರಿ ಶ್ಯಾಮಲೆಗೂ ರತ್ನಾಕರನಿಗೂ ಪರಸ್ಪರ ಪರಿಚಯ ಪ್ರೇಮತೊಡಗಿ ಅದು ಪರಾಕಾಷ್ಠೆಯನ್ನು ಮುಟ್ಟಿತು. ಗಿರಿಜೆ, ಸಾಮಾಜಿಕ ಅಡ್ಡಿಗಳ ಕಾರಣ ರತ್ನಾಕರನನ್ನು ಕೈಹಿಡಿಯಲಾರದೆ ವೈರಾಗ್ಯದವಳಾದ ಕಾರಣ ರತ್ನಾಕರನ ಒಲವು ಇಮ್ಮಡಿಯಾಗಿ ಶ್ಯಾಮಲೆಯ ಕಡೆಗೇ ಹರಿಯಿತು. ಮುನಿಯಬ್ಬನಿಂದ ಪಡೆದ ವಾಯುವಿದ್ಯೆಯ ಸಹಾಯದಿಂದ ಯಾರೂ ಅರಿಯದಂತೆ ಬೇಕೆಂದಾಗ ಅಂತಃ ಪುರಕ್ಕೆ ಹೋಗಿ ಶ್ಯಾಮಲೆಯೊಡನೆ ಸರಸವಾಗಿ ಕಾಲಕಳೆಯತೊಡಗಲು ಅವಳ ಸಹವಾಸದಿಂದ ಇವನ ಕಾವ್ಯಪ್ರತಿಭೆ, ಉಜ್ವಲಿಸಿ ಭರತೇಶ ವೈಭವದ ಹಲವು ಶೃಂಗಾರ ಸನ್ನಿವೇಶವೇಗಳನ್ನು ರಚಿಸುವನು. ಬಾಲ್ಯ ಸಹಪಾಠಿ ವಿಜಯಣ್ಣನ ಮತ್ಸರದ ಪರಿಣಾಮ ಮೊದಲು ಗಿರಿಜೆಯನ್ನು ಇವನಿಂದ ದೂರಮಾಡಿದಂತೆ ಈಗ ಶ್ಯಾಮಲೆಯಿಂದಲೂ ಇವನನ್ನು ದೂರ ಮಾಡಿತು. ರಾಜಾಗ್ರಹಕ್ಕೆ ಗುರಿಯಾಗಿ ಸೆರೆಮನೆಯಿಂದ ತಪ್ಪಿಸಿಕೊಂಡು ಹೋಗಿ ನಿರ್ವೇಗ್ ವರನಾಗಿ ಸನ್ಮಾನ ಸ್ವೀಕರಿಸಿ ಸಾಧನೆ ನಡೆಸತೊಡಗಿದನು. ಪ್ರೇಮಕಾತರಳಾದ ಶ್ಯಾಮಲೆ ಇವನನ್ನು ಹಿಂದಿರುಗಿಸಲು ಪ್ರಯತ್ತಿಸಿ ವಿಫಲಳಾಗಿ ತಾನು ವೈರಾಗ್ಯಪರಳಾಗಿ ಅರ್ಜಿಕೆ ಯಾಗುವಳು ರತ್ನಾಕರ ಸಾಧನೆಯಲ್ಲಿ ಒಂದು ಘಟ್ಟವನ್ನು ಮುಟ್ಟಿದನಂತರ ಮತ್ತೆ ಗುರುಗಳ ಅಪ್ಪಣೆಯಂತೆ ಭರತೇಶ ವೈಭವವನ್ನು ಸಂಪೂರ್ಣವಾಗಿ ಬರೆದು ಮುಗಿಸಿದ. ಅದರ ಖ್ಯಾತಿ ಎಲ್ಲೆಲ್ಲೂ ಹರಡತೊಡಗಿತು. ಇಲ್ಲಿಗೆ ಕತೆಯ ಒಂದು ಘಟ್ಟ ಮುಗಿದಿತ್ತು.

ಮುಂದೆ ಗುರುಗಳಿಗೆ ಖಾಯಿಲೆಯೆಂಬ ಸುದ್ದಿ ಕೇಳಿ ರತ್ನಾಕರ ಚಾರುಕೀರ್ತಿಗಳ ಅಪ್ಪಣೆ ಪಡೆದು ಮೂಡುಬಿದಿರೆಗೆ ಬಂದು ತನ್ನ ತಂಗಿಯ ಮನೆಯಲ್ಲಿ ಇರತೊಡಗಿದ ದಿನದಿನಕ್ಕೆ ಜನಪ್ರಿಯವಾಗುತ್ತಿದ್ದ ಭರತೇಶವೈಭವ ಕಾವ್ಯಕ್ಕೆ ಶೃತಪೂಜೆ ನಡೆಸಬೇಕೆಂದು ಇವನ ಹಿತೈಷಿಗಳು ಸಿದ್ಧಮಾಡಿಕೊಳ್ಳತ್ತಿರಲು ಅಸಹನೆಯಿಂದ ವಿಜಯಣ್ಣ ಮತ್ತೊಮ್ಮೆ ಇದನ್ನು ವಿರೋಧಿಸಿ ಕಾವ್ಯದೋಷಮಯವಾಗಿದೆಯೆಂದು ಗುರುಗಳಾದ ವಿಜಯಕೀರ್ತಿಗಳ ಮನಸ್ಸು ಕೆಡಿಸಿ ಆ ಬಗ್ಗೆ ಉತ್ತರ ಕೊಡಬೇಕೆಂದು ರತ್ನಕರನನ್ನು ವಾದಕ್ಕೆಳೆಯುತ್ತಾನೆ. ಪಂಡಿತ ಮನ್ನಣೆ ಬೇಡವೆಂದಿದ್ದರೂ ಹೀಗೊದಗಿದ ದುರ್ದರ ಸನ್ನಿವೇಶದಿಂದ ಕೆರಳಿದ ರತ್ನಕರ ತನ್ನ ಕಾವ್ಯ ನಿರ್ದೋಶಯುಕ್ತವೆಂದು ಸಾರಿ ವಿಜಯಣ್ಣನೆತ್ತಿದ ಆಕ್ಷೇಪಗಳಿಗೆಲ್ಲಾ ಸಮರ್ಪಕ ಉತ್ತರಕೊಟ್ಟು ಮಠಾಧಿಪತಿಗಳ ವರ್ತನೆಯನ್ನು ಖಂಡಿಸುತ್ತಾನೆ. ಕುಪಿತರಾದ ಆಚಾರ್ಯರು ರತ್ನಕರನನ್ನು ಅವನ ಕಾವ್ಯವನ್ನು ಬಹಿಷ್ಕರಿಸಲು ರತ್ನಾಕರ ಜೈನ ಮತದ ಬಗ್ಗೆ ಜಿಗುಪ್ಸೆ ಹೊಂದಿದವನಾಗಿ ಅಲೆಯುತ್ತಾ ನಡೆದುಕೊನೆಗೆ ಬಾಳೆಹೊನ್ನೂರು ಅಲ್ಲಿ ಗಿರಿಜೆಯ ಸತ್ಕಾರವನ್ನು ರಂಭಾಪುರಿ ಜಗದ್ಗುರುಗಳ ಆಶ್ರಯವನ್ನು ಪಡೆದು ಅವರ ಬಳಿ ಶಿವದೀಕ್ಷೆ ಪಡೆದು ವೀರಶೈವನಾಗಿ ಸೋಮೇಶ್ವರನೆಂಬ ಹೆಸರಿನಿಂದ ಮೆರೆಯುವನು ಕೀರ್ತಿಗಳ ಮರಣಾನಂತರ ಆ ಗುರುಸ್ಥಾನವನ್ನಾಕ್ರಮಿಸಿದ ವಿಜಯಣ್ಣನೂ ಕ್ರಮೇಣ ತನ್ನ ತಪ್ಪು ಅರಿತು ರತ್ನಕರನನ್ನು ಹುಡುಕಿಸಿ ತರಲು ಪ್ರಯತ್ತಿಸಿದನು. ಶ್ಯಾಮಲೆಯೂ ಹೊಂಬುಜದೇವೆಂದ್ರ ಕೀರ್ತಿಗಳೂ ರತ್ನಾಕರನಿಗಾಗಿ ಹುಡುಕಿ ಕಡೆಗೆ ಅವನು ಬಾಳಹೊನ್ನೂರಿನಲ್ಲಿ ವೀರಶೈವನಾಗಿರುವುದನ್ನುರಿತು ಅಲ್ಲಿಗೆ ಹೋಗಿ ಅವನನ್ನು ಮತ್ತೆ ಜೈನಮತಕ್ಕೆ ಬರಲು ಒಡಂಬಡಿಸಿ ರಂಭಾಪುರಿ ಸ್ವಾಮಿಗಳ ಅಪ್ಪಣೆ ಪಡೆದು ಅವನನ್ನು ಹಿಂದಿರುಗಿ

ಕರೆತರುವರು. ಮತ್ತೆ ಧ್ಯಾನ ಸಾಧನೆಗಳಲ್ಲಿ ತೊಡಗಿದ ರತ್ನಾಕರ ಮತ್ತೆ ಅಪರಾಜಿತ ಶತಕಗಳನ್ನು ರಚಿಸುವನು ವಿಜಯಣ್ಣನೇ ಹೊಂಬುಜಕ್ಕೆ ಬಂದು ರತ್ನಾಕರನಲ್ಲಿ ತನ್ನ ತಪ್ಪನ್ನೊಪ್ಪಿಕೊಂಡು ಮೂಡುಬಿದಿರೆಗೆ ಬರಬೇಕೆಂದು ಒತ್ತಾಯ ಮಾಡಿಕರೆದೊಯ್ದು ಅತ್ಯಂತ ವಿಜೃಂಭಣೆಯಿಂದ ಭರತೇಶ ವೈಭವಕ್ಕೆ ಶೃತಪೂಜೆ ನೆರವೇರಿಸುವನು.

ಸ್ಥೂಲವಾಗಿ ಮೇಲಿನ ಕಥಾಂಶವನ್ನು ಒಳಗೊಂಡಿರುವ ಈ ಗ್ರಂಥರತ್ನಾಕರನ ಬಹುಮುಖವಾದ ಮತ್ತು ಪ್ರತಿಭಾಪೂರ್ಣವಾದ ವ್ಯಕ್ತಿತ್ವವನ್ನು ಸುಂದರವಾಗಿ ಚಿತ್ರಿಸುತ್ತದೆ. ರತ್ನಾಕರನಿಗೆ ಬಾಲ್ಯದಿಂದಲೂ ವೀರಶೈವ ಮತದಲ್ಲಿ ಆಸಕ್ತಿ ಮೂಡಿದ್ದುದೂ ಅವನ ಭವಿಷ್ಯದಲ್ಲಿ ಮುಂದೆ ಅವನು ಮತಾಂತರ ಹೊಂದುವನೆಂದು ಇದ್ದಂತೆ ನಿರೂಪಿಸಿರುವುದೂ ಮಾರ್ಮಿಕವಾಗಿದೆ. ವೀರಶೈವ ಮತಕ್ಕೆ ಪ್ರತಿನಿಧಿಯಾಗಿ ಗಿರಿಜೆಯನ್ನೂ ಶೈವಮತಕ್ಕೆ ಪ್ರತಿಯಾಗಿ ಶ್ಯಾಮಲೆಯನ್ನೂ ಕಲ್ಪಿಸಿ ರತ್ನಾಕರ ಅವರಿಬ್ಬರ ಪ್ರೇಮವನ್ನು ಮತವನ್ನೂ ಹಂಚಿಕೊಂಡಂತೆ ಚಿತ್ರಿಸಿರುವುದು ಸುಂದರವಾಗಿದೆ. ಅವನ ಕಾವ್ಯರಚನೆಯ ಮಜಲುಗಳ ಅದಕ್ಕೆ ಅವನಿಗೊದಗಿದ ಪ್ರೇರೇಪಣೆಯು ಬಾಲ್ಯದಿಂದಲೇ ಅವನ ಒಲವು ಜಾನಪದ ರತ್ನಾಕರ, ವೀರಶೈವ ಮತಕ್ಕೆ ಸೇರಿ ಮತ್ತೆ ಜೈನ ಮತಕ್ಕೆ ಬಂದನೆನ್ನುವ ಹಲವು ವಿದ್ವಾಂಸರು ಒಪ್ಪಿರುವುದಾದರೂ ಪಾಲ್ಕುರಿಕೆ ಸೋಮನಾಥ ಕವಿ ರಚಿಸಿದ ಸೋಮೇಶ್ವರ ಶತಕವನ್ನೂ ರತ್ನಾಕರನೇ ಬರೆದನೆನ್ನುವುದು ವಿವಾದಾಸ್ಪದ ವಿಷಯ ಇಂಥ ವಿವಾದಾಸ್ಪದವಾಗಿರುವ ಸಂಗತಿಯನ್ನು ಹೀಗೆ ಎಂದು ನಿಶ್ಚಯಿಸಿದಂತೆ ಬರೆದಿರುವುದು ಸಮಂಜಸವಾಗಲಾರದು.

**ಆಕಾಶವಾಣಿ (ಬೆಂಗಳೂರು)**

ಈ ಗ್ರಂಥದಲ್ಲಿ ರತ್ನಾಕರನ ಬಹುಮುಖ ಮತ್ತು ಪ್ರತಿಭಾ ಪೂರ್ಣ ವ್ಯಕ್ತಿತ್ವದ ಸುಂದರ ನಿರೂಪಣೆ ಇದೆ. ಗ್ರಂಥವು ಸರಳ ಶೈಲಿ ಹಿತ ಮಿತ ವರ್ಣನೆ ಹಾಗೂ ಸುಂದರ ಸಂಭಾಷಣೆಯಿಂದ ಪರಿಪೂರ್ಣವಾಗಿ ಸರ್ವಾಂಗ ಸುಂದರವಾಗಿ ಮೂಡಿ ಬಂದಿದೆ. ಮೈಸೂರು ಸರ್ಕಾರದಿಂದ ಬಹುಮಾನ ಪಡೆದಿರುವ ಈ ಕೃತಿ ಓದುಗರಿಂದಲೂ ಮೆಚ್ಚುಗೆ ಪಡೆದಿದೆ.

**ಪ್ರಭುದ್ಧ ಕರ್ನಾಟಕ**

ಕವಿ ರತ್ನಾಕರನ ಕೃತಿಗಳನ್ನು ಅಧ್ಯಯನ ಮಾಡಿ ಕಾಲ್ಪನಿಕ ಅಂಶಗಳನ್ನು ಅದರಲ್ಲಿ ಸಮಾವೇಶಗೊಳಿಸಿ ಒಂದು ಉತ್ಕೃಷ್ಠ ಗ್ರಂಥವನ್ನು ರಚಿಸಿ ಕಾದಂಬರಿಕಾರರು ಕನ್ನಡ ಜನತೆಗೆ ಅತ್ಯಂತ ಉಪಕಾರವೆಸಗಿದ್ದಾರೆ ವಿಷಯ ನಿರೂಪಣೆ ಕೌಶಲ್ಯ ಮತ್ತು ಪಾತ್ರ ಪೋಷಣೆಯಲ್ಲಿ ಕಾದಂಬರಿಗಾರರು ಸಿದ್ಧಹಸ್ತರಾಗಿದ್ದಾರೆ ಮೈಸೂರು ಸರ್ಕಾರದ ಪುರಸ್ಕಾರ ಪಡೆದಿರುವ ಈ ಕೃತಿ ಸಂಗ್ರಹ ಯೋಗ್ಯವಾಗಿದೆ. ಕನ್ನಡದಲ್ಲಿ ಉತ್ತಮವಾದ ಗುಣಮಟ್ಟದ ಕಾದಂಬರಿಗಳಿಲ್ಲದ ಈ ಕಾಲದಲ್ಲಿ ಈ ಕೃತಿ ಆ ಕೊರತೆಯನ್ನು ತುಂಬುತ್ತದೆ. ಇದರಲ್ಲಿ ಎಷ್ಟೋಂದು ಜೀವ ಸಾಹಿತ್ಯವಿದೆ ರಸ ವಿದೆ, ರಾಗವಿದೆ, ವಿರಾಗವಿದೆ, ವೇದನೆಯಿದೆ, ಸರ್ವಧರ್ಮ ಸಮನ್ವಯವಿದೆ. ಈ ಎಲ್ಲಾ ಭಾವನೆಗಳನ್ನು ವಾಚಕರ ಮನ ಮುಟ್ಟುವಂತೆ ಮಾಡಿರುವ ಲೇಖಕರು, ಕೃತಕೃತ್ಯರಾಗಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಜೀವನ ಸಾಹಿತ್ಯ ರಚನೆಯೇ ಈ ಕಾದಂಬರಿಕಾರರ ದೃಷ್ಠಿಕೋನವಾಗಿದೆ. ಅವರ ಅದ್ಭುತ ಸಾಹಸ ಸಫಲವಾಗಿದೆ.

ಕನ್ನಡ ನುಡಿ.

ಕಾದಂಬರಿಕಾರರು ಅಪಾರ ಶ್ರದ್ದೆಯಿಂದ, ಅಸಕ್ತಿಯಿಂದ ರತ್ನಾಕರನ ಜೀವನಕ್ಕೆ ಸಂಬಂಧಿಸಿದ ಪ್ರಕರಣಗಳನ್ನು ಸಂಗ್ರಹಿಸಿ ಕಾದಂಬರಿ ರಚಿಸಿದ್ದಾರೆ ಅವರ ಪ್ರಯತ್ನ ಪ್ರಶಂಸನೀಯವಾಗಿದೆ.

ಇದೇ ಸಮಯದಲ್ಲಿ ಅವರು ತಾವು ಆಮೇರಿಕ ಇತಿಹಾಸವನ್ನು ವಿಶೇಷ ವಿಷಯವಾಗಿ ಅಭ್ಯಾಸ ಮಾಡಿದುದ್ದರಿಂದ ಅದರ ಬಗ್ಗೆಯು ಕೂಡ ತಮ್ಮ ಶೋಧನೆಯನ್ನು ಮುಂದುವರಿಸಿದರು. 1966 ರಲ್ಲಿ " ಇಂದಿನ ಅಮೇರಿಕ" ಎಂಬ ಪುಸ್ತಕವನ್ನು ಪ್ರಕಟಿಸಿದರು " ಮದರಾಸಿನ ಸೌತ್ ಇಂಡಿಯನ್ ಲಾಗ್ವೆಂಜ್ ಬುಕ್ ಟ್ರಸ್ಟ್ " ಈ ಪುಸ್ತಕವನ್ನು ಪ್ರಕಟಿಸಿದ್ದಿತು. ಇದರಲ್ಲಿ ಅನುವಾದಿತ ಲೇಖನಗಳಲ್ಲಿದೆ. ಎಂ.ವಿ. ಶ್ರೀನಿವಾಸರವರು ಬರೆದ ಕೆಲವು ಸಂಶೋಧಿತ ಲೇಖನಗಳು ಇದ್ದವು.

ಮೇಲೆ ವಿವರಿಸಿರುವಂತೆ ಶ್ರೀನಿವಾಸರವರು ಹೋದಕಡೆಯಲ್ಲೆಲ್ಲಾ ಸಾಹಿತ್ಯಿಕ, ಸಾಂಸ್ಕೃತಿಕ ಸೌರಭವನ್ನು ಪ್ರಸರಿಸಲು ಪ್ರಯತ್ನಿಸುತ್ತಿದ್ದರು. ತುಮಕೂರಿನ ಪ್ರಥಮ ದರ್ಜೆ ಕಾಲೇಜಿನಲ್ಲಿ ಇವರು ಅಧ್ಯಾಪಕರಾಗಿದ್ದಾಗ ತುಮಕೂರು ಜಿಲ್ಲಾ ಬರಹಗಾರರ ಸಂಘವನ್ನು ಸ್ಥಾಪಿಸಿದರು ಸಂಘದ ಕಾರ್ಯದರ್ಶಿಯಾಗಿ ಶ್ರೀನಿವಾಸರವರು ನಗರದಲ್ಲಿ ಅನೇಕ ಭಾಷಣ ಗೋಷ್ಠಿ ಗ್ರಂಥಪಟನೆ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಜನರಲ್ಲಿ ಸಾಹಿತ್ಯ ಅಭಿಮಾನವನ್ನು ಉದ್ದೀಪನಗೊಳಿಸುವಲ್ಲಿ ಯಶಸ್ವಿಯಾದರು.

ಬರಹಗಾರರ ಸಂಘದ ವತಿಯಿಂದ ಇವರು ಹಲವಾರು ಗ್ರಂಥಗಳನ್ನು ಪ್ರಕಟಿಸಿದರು. ಇವುಗಳಲ್ಲಿ "ಸಮರಸ" ಎನ್ನುವ ಲೇಖನಗಳ ಸಂಗ್ರಹ ಬಹಳ ಮುಖ್ಯವಾದುದು. ಇಲ್ಲಿಯ ಹೆಸರಾಂತ ಸಾಹಿತಿಗಳ ವಿದ್ವಾಂಸರ ಲೇಖನಗಳನ್ನು ಸಮರಸದಲ್ಲಿ ಪ್ರಕಟಿಸಲಾಯಹಿತು. ತುಮಕೂರು ಜಿಲ್ಲೆಯ ಬರಹಗಾರರು ಎಂಬ ಒಂದು ಸಂಗ್ರಹದಲ್ಲಿ ಜಿಲ್ಲೆಯ ಲೇಖಕರು ಹಾಗೂ ಅವರ ಕೃತಿಗಳ ಪರಿಚಯವನ್ನು ಮಾಡಿಕೊಡಲಾಗಿದೆ. 1960 ರಿಂದ 70ರ ಅವಧಿಯಲ್ಲಿ ಅವರು ಮೂರು ಪುಸ್ತಕಗಳನ್ನು ಪ್ರಕಟಿಸಿದರು. ಅವುಗಳಲ್ಲಿ ಸವದತ್ತಿಯರಟ್ಟರು ಎನ್ನುವುದು ಬಹಳ ಮುಖ್ಯವಾದುದು ಕಲ್ಯಾಣಿ ಚಾಲ್ಯಕ್ಯರ ಆಳ್ವಿಕೆಯಲ್ಲಿ ಅವರ ಸಾಹಿತಿಗಳಾಗಿದ್ದ ರಾಜರನ್ನು ಕುರಿತು ಶಾಸನ, ಸ್ಮಾರಕ, ಸಾಹಿತ್ಯ ಮುಂತಾದ ಅಧಾರಗಳನ್ನು ಅಭ್ಯಾಸಮಾಡಿ ಅವರು ಈ ಪುಸ್ತಕವನ್ನು ರಚಿಸಿದರು. 1967–72 ಅವಧಿಯಲ್ಲಿ ಅವರು ಜವಹರ್ ಲಾಲ್ ನೆಹರು ಮತ್ತು ಅಮೇರಿಕದ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಉನ್ನತ ವ್ಯಾಸಂಗವನ್ನು ಕೈಗೊಂಡಿದ್ದರಿಂದ ಅವರು ಗ್ರಂಥರಚನಾ ಕಾರ್ಯವನ್ನು ಸ್ವಲ್ಪ ಕಾಲ ಸ್ಥಗಿತಗೊಳಿಸಬೇಕಾಗಿತ್ತು. 75ರ ನಂತರ ಮತ್ತೆ ಅವರ ಸಾಹಿತ್ಯ ಕೃತಿ ಮುಂದುವರಿಯಿತು. 'ರಾಷ್ಟ್ರೋತ್ಥಾನ' ಮಾಲೆಯಲ್ಲಿ ಅವರ ಎರಡು ಪುಸ್ತಕಗಳು ರಣಜಿತ್ ಸಿಂಗ್, ಬಾಜೀರಾವ್ ಒಟ್ಟಿಗೆ ಪ್ರಕಟವಾದವು.

ಚಿತ್ರದುರ್ಗ ಜಿಲ್ಲೆ, ಬಹು ಪ್ರಾಚೀನವಾದ ಇತಿಹಾಸವುಳ್ಳ ಪ್ರದೇಶ ಈ ಜಿಲ್ಲೆಯಲ್ಲಿ ಚಿತ್ರದುರ್ಗದ ಕಾಲೇಜು ಉಪ ಪ್ರಾಧ್ಯಾಪಕರಾಗಿದ್ದಾಗ ಅಲ್ಲಿನ ಇತಿಹಾಸವನ್ನು ಪುರಾತತ್ವವನ್ನು ಅಭ್ಯಾಸಮಾಡಿದರು. ಅಲ್ಲಿ ಉತ್ಸಾಹಿ ಇತಿಹಾಸದ ಆಸಕ್ತರನ್ನು, ಸಂಶೋಧಕರನ್ನು ಸೇರಿಸಿ ಜಿಲ್ಲಾ

ಇತಿಹಾಸ ಸಂಶೋಧನಾ ಮಂಡಳಿ ಚಿತ್ರದುರ್ಗ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಶೋಧನಾ ಮಂಡಳಿಯೂ ಜಿಲ್ಲೆಯಲ್ಲಿ ವ್ಯಾಪಕವಾದ ಸಂಶೋದನಾ ಮತ್ತು ಗ್ರಂಥಗಳು ಅದರ ಫಲವಾಗಿ ಸುಮಾರು 12 ಪುಸ್ತಕಗಳು ಹೊರಬಂದವು ಇದರಲ್ಲಿ ಚಂದ್ರವಳ್ಳಿ ಎಂಬ ಕೃತಿಯು ಸಾಕಷ್ಟು ಮಾಧ್ಯಮಗಳ ಪ್ರಸಂಸೆಗೆ ಪಾತ್ರವಾಗಿದೆ. ಚಿತ್ರದುರ್ಗದ ಸಮಗ್ರ ಇತಿಹಾಸವನ್ನು ಪ್ರಮುಖ ಹಂತಗಳನ್ನು ಈ ಗ್ರಂಥದ ಲೇಖನಗಳಲ್ಲಿ ವಿವರಿಸಲಾಗಿದೆ. ಅದಲ್ಲದೆ ಅನೇಕ ಹೊಸ ದಾಖಲೆಗಳನ್ನು ಈ ಗ್ರಂಥದಲ್ಲಿ ಸೇರಿಸಲಾಗಿದೆ.

**ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆಯ ಸಮಗ್ರ ಇತಿಹಾಸ)**

ಚಿತ್ರದುರ್ಗವೆಂದರೆ ಬೆಟ್ಟದ ಮೇಲೆ ಕಟ್ಟಿದ ಕಲ್ಲಿನ ಕೋಟೆಯಷ್ಟೇ ಎಂಬ ಬಾವನೆಯನ್ನು ನೀಗಿಸುವ ದಿಟ್ಟ ಸಾಹಸ ಈ ಕೃತಿ ಏನೂ ಇಲ್ಲದೆಯೇ ಎದ್ದ ಕಡೆ ಇಷ್ಟೊಂದು ಜನ ಲೇಖಕರ ಆಸಕ್ತಿ ಕೆರಳಿಸುವಂತಹಾ ವಿಷಯ ಸಂಗ್ರಹಿಸಿರುವುದು ಮೆಚ್ಚುಗೆಯ ಅಂಶ ಈ ನಿಟ್ಟಿನಲ್ಲಿ ಚಂದ್ರವಳ್ಳಿ ಮಾರ್ಗದರ್ಶಕ.

**ನಗರವಾಣಿ:**

ಜಿಲ್ಲೆಯ ಪ್ರತಿಯೊಂದು ಮನೆಯವರೂ ಕೊಂಡು ಓದಬಹುದಾಗಿದೆ.

**ಸುಧಾ**

ಈ ರೀತಿ ಸ್ಥಾನೀಯ ಇತಿಹಾಸವನ್ನು ಬರೆಯಲು ಉತ್ಸಾಹಿಗಳೂ, ವಿದ್ವಾಂಸರೂ ಮುಂದೆ ಬಂದುದು ಅಭಿನಂದನೀಯ ಕ್ರಮ ಕರ್ನಾಟಕದ ಎಲ್ಲ ಜಿಲ್ಲೇಗಳ ಇತಿಹಾಸಾಧ್ಯಾಪಕರು ಇಂಥ ಯತ್ನ ಮಾಡುವಂತೆ ಚಂದ್ರವಳ್ಳಿ ಮೇಲ್ಪಂಕ್ತಿ ಹಾಕಿ ಕೊಟ್ಟಿದೆ.

**ತರಳಬಾಳು:**

ವಿಶ್ವವಿದ್ಯಾನಿಲಯಗಳು ಮತ್ತಿತರ ಭಾರಿ ಸಂಘ ಸಂಸ್ಥೆಗಳು ಮಾಡಬೇಕಾದಂತಹ ಕೆಲಸವನ್ನು ಮಾಡುವಲ್ಲಿ ಅಂಜುತ್ತಲೇ ಕೈಗೋಂಡಿದ್ದರೂ ಅದು ತನ್ನ ಪ್ರಯತ್ನದಲ್ಲಿ ಯಶಸ್ವಿಯಾಗಿದೆ.

**ಜನತಾವಣಿ:**

ಪ್ರಸಿದ್ಧ ಲೇಖಕರೂ ಇತಿಹಾಸದ ವಿದ್ವಾಂಸರು ಆಗಿರುವ ಡಾ.ಎಂ.ವಿ.ಶ್ರೀನಿವಾಸ್ ಮತ್ತು ಲಕ್ಷ್ಮಣ ತೆಲಗಾವಿ ಇವರು ಸಂಪಾದಿಸಿರುವ ಈ ಕೃತಿ ವಿದ್ಯಾರ್ಥಿಗಳಿಗೆ ಸಾಮಾನ್ಯ ಜನರಿಗೂ ಬಹು ಉಪಯುಕ್ತ ಆಧಾರ ಗ್ರಂಥ, ಇಲ್ಲಿನ ಪ್ರತಿಯೊಂದು ಲೇಖನವೂ ವಿದ್ವತ್ ಪೂರ್ಣವಾಗಿದ್ದು ಜಿಲ್ಲೇಯ ಇತಿಹಾಸದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ. ಜಿಲ್ಲೆಯ ಸಮಗ್ರ ಇತಿಹಾಸವನ್ನೂ ಬಹು ಸುಂದರವಾಗಿ ಪರಿಚಯ ಮಾಡಿಕೊಡುವ ಈ ಕೃತಿ ಒಂದು ಶ್ರೇಷ್ಠ ಚಾರಿತ್ರಿಕ ಗ್ರಂಥವಾಗಿದೆ.

**ಲೋಕವಾಣಿ:**

ಈ ಕೃತಿಯು ಇತರ ಜಿಲ್ಲೆಗಳವರಿಗೆ ತಮ್ಮ ತಮ್ಮ ಜಿಲ್ಲೆಗಳ ಬಗ್ಗೆ ಸಂಶೋದನೆ ನಡೆಸಿ ಸೂಕ್ತ ಮಾಹಿತಿ ಹೊರತರುವ ಪ್ರೇರಣೆ ನೀಡುವಷ್ಟು ಅನುಕರಣೀಯವಾಗಿದೆ.

**ಕನ್ನಡ ಪ್ರಭ:**

ಗ್ರಂಥಾದಾರ, ವಸ್ತ್ವಧಾರ, ಸ್ಥಳಾದಾರ, ವ್ರಕ್ತ್ಯಾಧಾರಗಳಿಂದ ರಚಿತವಾದ ಚಂದ್ರವಳ್ಳಿ ಗ್ರಂಥವು ಇತಿಹಾಸ ಕ್ಷೇತ್ರದಲ್ಲಿ ಒಂದು ಬೆಲೆಯುಳ್ಳ ಸ್ವತ್ತಾಗಿದೆ.

**ಸಂಯುಕ್ತ ಕರ್ನಾಟಕ:**

ಇಲ್ಲಿನ ಲೇಖನಗಳು ಬಹು ಮಹತ್ವದ್ದಾಗಿವೆ ಮತ್ತು ಆಳವಾಗಿ ಚರ್ಚಿಸಲ್ಪಟ್ಟಿವೆ_ ಚಂದ್ರವಳ್ಳಿ ಗ್ರಂಥದ ಪುಟ ತಿರುವಿದಂತೆ ಅಮೂಲ್ಯವೆನಿಸುವ ಲೇಖನಗಳು ಇದ್ದು ಈ ಜಿಲ್ಲೆಯ ಇತಿಹಾಸವಲ್ಲದೆ ಕರ್ನಾಟಕ ಇತಿಹಾಸದ ಮೇಲೂ ಬೆಳಕನ್ನು ಚೆಲ್ಲುತ್ತದೆ.

ಚಿತ್ರದುರ್ಗದಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿದ್ದಾಗ ಅಲ್ಲಿನ ಇತಿಹಾಸವನ್ನಲ್ಲದೆ ಇತಿಹಾಸ ಕಾರರನ್ನು ಅವರು ಪರಿಚಯ ಮಾಡಿಕೊಳ್ಳುತ್ತಾ ಹೋದರು ಈ ಸಂದರ್ಭದಲ್ಲಿ ಚಿತ್ರದುರ್ಗದ ಪ್ರಸಿದ್ಧ ಇತಿಹಾಸ ಕಾರ ದಿ.ಹುಲ್ಲೂರು ಶ್ರೀನಿವಾಸ ಜೋಯಿಷರ ಕೃತಿಗಳು ಅವರ ಗಮನಕ್ಕೆ ಬಂದವು. ಶ್ರೀನಿವಾಸ ಜೋಯಿಸರ ಎಲ್ಲಾ ಲೇಖನಗಳನ್ನು ಒಂದು ಕಡೆ ಸೇರಿಸಿ ಪ್ರಕಟಿಸಬೇಕೆಂದು ಅವರು ತೀರ್ಮಾನಿಸಿದರು ಅದರ ಪರಿಣಾಮ ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು ಎಂಬ ಕೃತಿಯು 1975ರಲ್ಲಿ ಪ್ರಕಟವಾಯಿತು. ಜೋಯಿಸರ ಅಪ್ರಕಟಿತ ಅಪೂರ್ವ ಲೇಖನಗಳನ್ನು ಟಿಪ್ಪಣಿಗಳೊಂದಿಗೆ ಹೊರ ತರಲಾಯಿತು.

ಎಂವಿ. ಶ್ರೀನಿವಾಸರವರೊಂದಿಗೆ ಈ ಕಾರ್ಯದಲ್ಲಿ ಕೈಜೋಡಿಸಿದ್ದವರು ಮತ್ತೊಬ್ಬ ಪ್ರತಿಭಾನ್ವಿತ ಸಂಶೋಧಕರಾದ ಲಕ್ಷ್ಮಣ ತೆಲಗಾವಿಯವರು. ಈ ಗ್ರಂಥವು ಹಾಗೂ ಚಂದ್ರವಳ್ಳಿ ಜಿಲ್ಲೆಯ ಜನರಲ್ಲಿ ಸ್ಥಳೀಯ ಇತಿಹಾಸದ ಬಗ್ಗೆ ಆಸಕ್ತಿ ಇಮ್ಮಡಿಸುವಂತೆ ಮಾಡಿತು.

**ಮಸ್ತಾನಿ (ಐತಿಹಾಸಿಕ ಕಾದಂಬರಿ)**

**ಪ್ರಜಾವಣಿ:**

ಕನ್ನಡದಲ್ಲಿ ಐತಿಹಾಸಿಕ ಕಾದಂಬರಿಗಳು ಇಲ್ಲವೇ ಇಲ್ಲ ಎನ್ನುವಾಗ ಇಂತಹ ಪರಿಶ್ರಮ ಪೂರ್ವಕ ಪ್ರಾಮಾಣಿಕ ಪ್ರಯತ್ನಕ್ಕೆ ಸ್ವಾಗತವಿದೆ ಕತೆ ಮೆಚ್ಚತಕ್ಕಂತಹುದು ಲೇಖಕರು ದೊರಕಿಸಿದ ಚಾರಿತ್ರಿಕ ವಿವರಗಳು ಕತೆಗೆ ಜೀವಕಳೆಯನ್ನು ಒದಗಿಸುತ್ತವೆ ಒಳ್ಳೆಯ ಐತಿಹಾಸಿಕ ಕಾದಂಬರಿಗಳನ್ನು ನಮಗೆ ಒದಗಿಸುವ ಶಕ್ತಿ ಶ್ರೀ ಶ್ರೀನಿವಾಸ್ ರಲ್ಲಿದೆ.

ಚಿತ್ರದುರ್ಗ ಜಿಲ್ಲೇಯ ಜನಪ್ರಿಯ ಲೇಖಕರಾದ ಶ್ರೀನಿವಾಸ ಜೋಯಿಷರು ಸ್ಥಳೀಯ ಇತಿಹಾಸ ಹಾಗೂ ಕರ್ನಾಟಕ ಇತಿಹಾಸವನ್ನು ಕುರಿತು. 9 ಗ್ರಂಥಗಳನ್ನು 200ಕ್ಕೂ ಹೆಚ್ಚು ಲೇಖನಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದ್ದರು. ಅವುಗಳನ್ನೆಲ್ಲಾ ಸಂಗ್ರಹಿಸಿ ಸಂಪಾದಿಸಿ 5 ಗ್ರಂಥಗಳನ್ನು

ಪ್ರಕಟಿಸುವ ಕಾರ್ಯವನ್ನು ಎಂ.ವಿ. ಶ್ರೀನಿವಾಸರವರು ಕೈಗೊಂಡರು. ಅವುಗಳಲ್ಲಿ ಸಂಶೋಧನಾ ಲೇಖನಗಳು ಎನ್ನುವುದು ಬಹು ಮಹತ್ವ ಪೂರ್ಣವಾದ ಕೃತಿಯಾಗಿದೆ. ಇದರಲ್ಲಿ ಶ್ರೀನಿವಾಸರವರು ಲಕ್ಷ್ಮಣ ತೆಲಗಾವಿಯವರು ವಿಶೇಷ ಶ್ರಮ ಪಟ್ಟು ಲೇಖನಗಳನ್ನು ಸಂಪಾದಿಸಿ ಹೊರತಂದಿದ್ದಾರೆ. ಈ ಪುಸ್ತಕದಲ್ಲಿ ಇಬ್ಬರು ಸಂಪಾದಕರು ವಿದ್ವತ್ ಪೂರ್ಣವಾದ ಅನುಬಂಧಗಲನ್ನು ಸೇರಿಸಿರುವುದು ಪುಸ್ತಕದ ಮೌಲ್ಯಗಳನ್ನು ಹೆಚ್ಚಿಸಿದೆ. ಈ ಪುಸ್ತಕದ ಬಿಡುಗಡೆಯ ಕಾರ್ಯಕ್ರಮದಲ್ಲಿ ಎಸ್.ನಿಜಲಿಂಗಪ್ಪನವರು, ಪ್ರೊ, ಎಸ್. ಶೆಟ್ಟರ್ ಅವರು ಭಾಗವಹಿಸಿ ಗ್ರಂಥವನ್ನು ಸಂಪದಕರನ್ನು ಶ್ಲಾಘಿಸಿದರು.

**ಹು.ಶ್ರೀ. ಜೋಯಿಷರ ಸಂಶೋಧನಾ ಲೇಖನಗಳು**
**ಪ್ರಜಾವಣಿ:**

ಪ್ರೊ, ಲಕ್ಷ್ಮಣ ತೆಲಗಾವಿ, ಡಾ.ಎಂ.ವಿ.ಶ್ರೀನಿವಾಸ್ ಅವರು ಸ್ವತ: ಸಂಪಾದನೆ ಮಾಡಿದ ಜ್ಞಾನದ ಬಲದಿಂದ ವಿಖ್ಯಾತ ವಿದ್ವಾಂಸರೆನಿಸಿದ ಶ್ರೀನಿವಾಸ ಜೋಯಿಷರ ಸಂಶೋಧನಾ ಲೇಖನಗಳನ್ನು ಸಮಗ್ರವಾಗಿ ಸಂಗ್ರಹಿಸಿಕೊಟ್ಟು ಉಪಯುಕ್ತ ಕೆಲಸಮಾಡಿದ್ದಾರೆ.

ಅನೇಕ ವಿಷಯಗಳಲ್ಲಿ ಇಂದು ಸಂಶೋದನೆಯನ್ನು ಮುಂದುವರಿಸಲು ಈ ಪುಸ್ತಕ ದಿಕ್ಸೂಚಿಯಾಗಿದೆ. ಈ ಪುಸ್ತಕಕ್ಕೆ ನಿಜವಾದ ಘನತೆ ಉಂಟಾಗಿರುವುದು ಅನುಬಂಧಗಳಿಂದ ಸಂಪಾದಕದ್ವಯರ ಈ ಕೊಡುಗೆ ಅನುಕರಣೀಯ, ಶ್ಲಾಘನೀಯ. ವಿದ್ವತ್ತು ಶ್ರದ್ದೆ ಪರಿಶ್ರಮಗಳ ಸಂಗಮ ಈ ಪುಸ್ತಕ.

ಇದು ಸುಂದರ ಸಂಪುಟ ಇಂತಹ ಸಮಗ್ರ ಸಂಪುಟಗಳು ಬಂದಾಗ ಕನ್ನಡ ಸಂಸ್ಕೃತಿಯ ಮೂಲೆ ಮೂಡಕುಗಳಿಗೆ ನೂರಾರು ದೀಪಗಳನ್ನು ಹಚ್ಚುವಂತಾಗುತ್ತದೆ. ಇಂಥ ದೀಪಗಳ ಬೆಳಕಿನಲ್ಲಿ ನಮ್ಮ ಗ್ರಹಿಕೆಗಳು ಹೊಸದಾಗುತ್ತವೆ. ಸಂಪಾದಕರ ಶ್ರಮವನ್ನೂ ಪ್ರಕಟಿಸಿದವರ ಶ್ರದ್ದೆಯನ್ನು ಕನ್ನಡ ಜನತೆ ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕಾಗುತ್ತದೆ.

**The Hindu**

The Readers owe a debt of gratitude to and appreciation of the sterling work put in by the two editors Laxman Telegavi and Dr. M.V. Srinivas which testifies to their deep and abiding commitment to the cause of History and the jis contribution to it.

**ವಿಶಾಲ ಕರ್ನಾಟಕ**

ಹು.ಶ್ರೀ.ಜೋಯಿಸರ ಐತಿಹಾಸಿಕ ಲೇಖನಗಳು ಸಂ ಎಂ.ವಿ.ಶ್ರೀನಿವಾಸ್ ಲಕ್ಷ್ಮಣ ತೆಲಗಾವಿ. ನಮ್ಮ ಹಿರಿಯ ವಿದ್ವಾಂಸರೊಬ್ಬರು ಕರ್ನಾಟಕ ಹಾಗೂ ಇತಿಹಾಸಕ್ಕೆ ನೀಡಿರುವ ಕಾಣಿಕೆಗಳ ಈ ಸಂಗ್ರಹ ಸ್ವಾಗತಾರ್ಹ. ಸಂಗ್ರಹ ಯೋಗ್ಯ ಹೊತ್ತಗೆ ಇದು.

**ಸುಧಾ**

ಸಂಪಾದನೆಯ ಕೆಲಸ ನಿರ್ವಹಿಸಿರುವ ಲಕ್ಷ್ಮಣ್ ತೆಲಗಾವಿ ಹಾಗೂ ಡಾ॥ ಎಂ.ವಿ.ಶ್ರೀನಿವಾಸ್ ತಮ್ಮ ಕೆಲಸವನ್ನು ಅತಿಶ್ರದ್ಧೆ ಹಾಗೂ ಜವಾಬ್ದಾರಿಯಿಂದ ನಿರ್ವಹಿಸಿ ಓದುಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಕನ್ನಡ ನಾಡಿನ ಇತಿಹಾಸ ಹಾಗೂ ಸಂಸ್ಕೃತಿಯಲ್ಲಿ ಆಸಕ್ತಿಯುಳ್ಳವರು ಓದಲೇಬೇಕಾದ ಸ್ವಾರಸ್ಯ ಪೂರ್ಣ ಕೃತಿ.

**Deccan Heralde:**

Every student of Karnataka History can make use of this publication; which provokes though hints on furure research and also inspires.

ಚಿತ್ರದುರ್ಗದಲ್ಲಿದ್ದಾಗ ಎಂ.ವಿ.ಶ್ರೀನಿವಾಸರವರಿಗೆ ಜಿಲ್ಲೆಯ ಹಲವಾರು ಪ್ರಸಿದ್ಧ ಲೇಖಕರ ವಿದ್ವಾಂಸರ ಪರಿಚಯವುಂಟಾಯಿತು. ಇದೇ ಜಿಲ್ಲೆಯ ಬೆಳಗೆರೆ ಕೃಷ್ಣಶಾಸ್ತ್ರಿಗಳು ಎಂಬ ಸಮಾಜ ಸೇವಕರು ಕವಿಗಳು ನಾಟಕಕಾರರು ಆದ ಬಳಗೆರೆ ಕೃಷ್ಣಶಾಸ್ತ್ರಿಗಳ ಪರಿಚಯವಾದುದ್ದು ಶ್ರೀನಿವಾಸರವರ ಜೀವದ ಒಂದು ಮುಖ್ಯ ಘಟನೆ ಬೆಳಗೆರೆಯ ಚಂದ್ರಶೇಖರ ಶಾಸ್ತ್ರಿಗಳು ಎಂಬ ಒಬ್ಬ ಪ್ರತಿಭಾನ್ವಿತ ಆಶ್ರುಕವಿಗಳು ತಮ್ಮ ಸಹೃದಯತೆಯಿಂದ ಹಾಗೂ ಆಶ್ರು ಕವಿಗಳಲ್ಲಿ ಕರ್ನಾಟಕದ ಬಹುತೇಕ ಸಾಹಿತಿಗಳಿಗೆ ಪರಿಚಯವಾಗಿದ್ದರು. ಅವರ ಕವಿತೆಗಳನ್ನು ಚಂದ್ರಶೇಖರ ಶಾಸ್ತ್ರಿಗಳನ್ನು ಕುರಿತು ಇದು ಎಂಥ ಜೀವನವಯ್ಯ? ಎಂಬ ಲೇಖನ ಸಂಗ್ರಹ ಕೃಷ್ಣಮೂರ್ತಿ ಹನೂರು ಅವರೊಂದಿಗೆ ಹೊರತಂದರು ಇದರ ಜೊತೆಯಲ್ಲಿಯೇ ಬೆಳಗೆರೆ ಕೃಷ್ಣಶಾಸ್ತ್ರಿಗಳಿಗೆ ಚಿನ್ಮಯ ಎಂಬ ಸಂಭಾವನಾ ಗ್ರಂಥವನ್ನು ಸಮರ್ಪಿಸಲಾಯಿತು. ಅದರ ಸಂಪಾದಕರು ಡಾ॥ ಎಂ.ವಿ. ಶ್ರೀನಿವಾಸ ಮತ್ತು ಡಾ॥ ಕೃಷ್ಣಮೂರ್ತಿ ಹನೂರು 400 ಪುಟಗಳ ಈ ಗ್ರಂಥವು ಸಾಹಿತ್ಯ ಇತಿಹಾಸ ಸಂಸ್ಕೃತಿಗೆ ಸಂಬಂಧಿಸಿದಂತೆ ಅನೇಕ ಉಪಯುಕ್ತ ಲೇಖನಗಳನ್ನು ಒಳಗೊಂಡಿದ್ದಿತು. ಇತಿಹಾಸಕ್ಕೂ ಸಂಬಂಧಪಟ್ಟಂತೆ ಶ್ರೀನಿವಾಸರವರು ಬರೆದಗ್ರಂಥಗಳಲ್ಲಿ ಮೂರು ಕೃತಿಗಳ್ನು ಇಲ್ಲಿ ಉಲ್ಲೇಖಿಸಬಹುದು.

1972ರಲ್ಲಿ ಅವರು ಸತ್ಯನಾರಾಯಣರಾವ್‌ರೊಂದಿಗೆ ಪ್ರಪಂಚದ ಚರಿತ್ರೆ ಎಂಬ ಪುಸ್ತಕವನ್ನು ಬರೆದಿದ್ದರು. ಮೈಸೂರಿನ ಗೀತಾ ಬುಕ್ ಹೌಸ್ ಈ ಗ್ರಂಥವನ್ನು ಪ್ರಕಟಿಸಿತು ಹಾಗಯೇ ಇವರು ಕರ್ನಾಟಕ ಇತಿಹಾಸ ಎನ್ನುವ ಇಂಗ್ಲೀಷ್ ಗ್ರಂಥವನ್ನು ಕನ್ನಡಕ್ಕೆ ಅನುವಾದ ಮಾಡಿದರೆ. 1984ರಲ್ಲಿ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ಒಂದು ಗ್ರಂಥವನ್ನು ಸಂಪಾದಿಸಿದ್ದಾರೆ. ಇದನ್ನು ತುಮಕೂರಿನ ಇತಿಹಾಸ ಪರಿಷತ್ತು ಪ್ರಕಟಿಸಿದೆ.

ಒಲಂಪಿಕ್ ಸ್ವರ್ಧೆಗಳ ಇತಿಹಾಸವನ್ನು ಕುರಿತ ಪ್ರಜ್ವಲಿಸುವ ಪಂಜು ಎಂಬ ಗ್ರಂಥವನ್ನು ಮೈಸೂರಿನ ನಭಶ್ರೀ ಪ್ರಕಾಶನ ಪ್ರಕಟಿಸಿದೆ. ಎಂ.ವಿ.ಶ್ರೀನಿವಾಸರವರು ಸಂಪಾದಿಸಿರುವ ಒಂದು ಮಹತ್ವದ ಕೃತಿ "Geo Politics of India" ಎಂಬ ಗ್ರಂಥ ಇದರಲ್ಲಿ ಶ್ರೀನಿವಾಸರವರು "Geo

Politics of India" ಎನ್ನುವ ವಿಷಯವನ್ನು ಕುರಿತು ವಿದ್ವತ್ ಪೂರ್ಣವಾದ ಒಂದು ಪ್ರಸ್ತಾವನೆಯನ್ನು ರಚಿಸಿದ್ದಾರೆ.

ಎಂ.ವಿ.ಶ್ರೀನಿವಾಸರವರು ಇತಿಹಾಸ, ಸಾಹಿತ್ಯ ಸಂಸ್ಕೃತಿ, ಇವುಗಳನ್ನು ಕುರಿತು 150ಕ್ಕೂ ಹೆಚ್ಚು ಲೇಖನಗಳನ್ನು ಬರೆದಿದ್ದಾರೆ. ಇವು ಅನೇಕ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಪ್ರಕಟವಾಗಿದೆ. ಹಾಗೆಯೇ ಅನೇಕ ರಾಜ್ಯ ರಾಷ್ಟ್ರಮಟ್ಟದ ವಿಚಾರ ಸಂಕೀರ್ಣಗಳು ಸಂಶೋಧನಾ ಪ್ರಬಂಧನಗಳನ್ನು ಮಂಡಿಸಿದ್ದಾರೆ. ಸಂಬಂಧಪಟ್ಟ ಸಂಸ್ಥೆಗಳು ಅವರ ಲೇಖನ- ಪ್ರಬಂಧಗಳನ್ನು ತಮ್ಮ ಗ್ರಂಥಗಳಲ್ಲಿ ಪ್ರಕಟಿಸಿವೆ. ಲೇಖನಗಳು ಅವರ ಅದ್ಭುತ ಪ್ರತಿಭೆ, ಅನುಭವ ಬದ್ಧತೆಗೆ ಸಾಕ್ಷಿಯಾಗಿದೆ.

ಅನೇಕ ಸ್ವತಂತ್ರ ಗ್ರಂಥಗಳಲ್ಲದೆ ಎಂ.ವಿ. ಶ್ರೀನಿವಾಸರವರು ಸುಮಾರು 10 ನಿಯತಕಾಲಿಕೆಗಳ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಅವುಗಳಲ್ಲಿ ಇತಿಹಾಸ ಚಂದ್ರಿಕೆ ಮಲ್ಲಾರ, ಮಾನವಿಕ ಕನಾಟಕ, ಇತಿಹಾಸ ಮೊದಲಾದವು ಇತಿಹಾಸ ಕ್ಷೇತ್ರಕ್ಕೆ ಉತ್ತಮವಾದ ಕೊಡುಗೆಯನ್ನು ನೀಡಿದ್ದಾರೆ. "Studies in Karnataka History & Culture" ಎಂಬ ಮಾಲಿಕೆಯಲ್ಲಿ ಅವರು ಕರ್ನಾಟಕ ಇತಿಹಾಸ ಕಾಂಗ್ರೆಸ್ ನ 5 ಸಂಚಿಕೆಗಳನ್ನು ಸಂಪಾದಿಸಿ ಹೊರತಂದಿದ್ದಾರೆ.

ಗ್ರಂಥರಚನೆ ಸ್ವತಂತ್ರ ಲೇಖನಗಳಲ್ಲದೆ ಇವರು ಅನೇಕ ಪುಸ್ತಕಗಳಿಗೆ ಮುನ್ನೂಡಿಗಳನ್ನು ಬರೆದು ಲೇಖಕರಿಗೆ ಉತ್ತೇಜನ ನೀಡಿದ್ದಾರೆ. ಹಾಗೇಯೇ ಇತಿಹಾಸ. ಸಾಹಿತ್ಯಕ್ಕೆ ಸಂಬಂಧಿಸಿದ ನೂರಾರು ಗ್ರಂಥ ವಿಮರ್ಶೆಗಳು ಇವರ ಪಾಂಡಿತ್ಯಕ್ಕೆ ಸಾಕ್ಷಿಯಾಗಿವೆ.

**ಇತಿಹಾಸಕ್ಕೆ ಸಂಬಂಧಿಸಿದ ಲೇಖನಗಳು:**

ಸಂಶೋಧನ ರಂಗದಲ್ಲಿ ವಿಷಯ ಯಾವುದೇ ಆಗಿದ್ದರೂ ಆ ವಿಷಯಗಳನ್ನು ಕುರಿತು ಸಂಶೋಧನಾ ಪುಸ್ತಕಗಳ ಸಂಖ್ಯೆಗೆ ನೂರು ಮಡಿಯಷ್ಟು ಸಂಶೋಧನಾತ್ಮಕ ಲೇಖನಗಳು ಪ್ರಕಟಗೊಳ್ಳುತ್ತವೆ. ಗತಿಸಿ ಹೋದ ಸಂಶೋಧಕರ ಸಮಸ್ತ ಲೇಖನಗಳನ್ನು ಒಂದೆಡೆ ಸಂಗ್ರಹಿಸಿ ಕೊಡುವುದು ತುಂಬ ಉಪಯುಕ್ತವಾದ ಕಾರ್ಯವಾಗುತ್ತದೆ. ಪ್ರೊ.ಲಕ್ಷ್ಮಣ ತೆಲಗಾವಿ ಡಾ:ಎಂ.ವಿ.ಶ್ರೀನಿವಸ್, ಅವರು ಸ್ವತಃ ಸಂಪಾದನೆ ಮಾಡಿದ ಜ್ಞಾನದ ಬಲದಿಂದ ವಿಖ್ಯಾತ ವಿದ್ವಾಂಸರೆನಿಸಿದ ಹುಲ್ಲೂರು ಶ್ರೀನಿವಾಸ ಜೋಯಿಷರ ಸಂಶೋಧನ ಲೇಖನಗಳನ್ನು ಸಮಗ್ರವಾಗಿ ಸಂಗ್ರಹಿಸಿಕೊಟ್ಟು ಉಪಯುಕ್ತ ಕೆಲಸ ಮಾಡಿದ್ದಾರೆ. ಶ್ರೀನಿವಾಸ ಜೋಯಿಷರು ಮಾಡಿದ ಸಂಶೋಧನೆಯನ್ನು ಅನುಕರಿಸಿ ಇತರರು ಮುಂದುವರಿಸಿದ ಸಂಶೋಧನೆಯ ಫಲಗಳನ್ನು ಅಧ್ಯಯನಗಳ ಸಾರವನ್ನು ಸಂಪಾದಕರು ತುಂಬ ಶ್ರಮವಹಿಸಿ ಕೊಟ್ಟಿರುವುದು ಅತ್ಯಂತ ಉಪಯುಕ್ತವೂ ಶ್ಲಾಘನೀಯವೂ ಆಗಿದೆ.

ಜೋಯಿಷರ ಸಂಶೋಧನ ಶ್ರದ್ದೆಯನ್ನರಿಯಲು ಈ ಪುಸ್ತಕ ಸಹಾಯ ಮಾಡುವುದರೊಡನೆ ಈ ವಿಷಯಗಳಲ್ಲಿ ಇಂದು ಸಂಶೋಧನೆಯನ್ನು ಮುಂದುವರಿಸಲು ಈ ಪುಸ್ತಕ ದಿಕ್ಸೂಚಿಯಾಗಿದೆ. ಈ ಪುಸ್ತಕಕ್ಕೆ ನಿಜವಾದ ಘನತೆ ಉಂಟಾಗಿರುವುದು ಅನುಬಂಧಗಳಿಂದ

ಸಂಪಾದಕದ್ವಯರ ಈ ಕೊಡುಗೆ ಅನುಕರಣೀಯ, ಶ್ಲಾಘನೀಯ ವಿದ್ವತ್ತು ಶ್ರದ್ಧೆ ಪರಿಶ್ರಮಗಳ ಸಂಗಮ ಈ ಪುಸ್ತಕ

ನಮ್ಮ ಹಿರಿಯ ತಲೆಮಾರಿನ ಗಣ್ಯ ವಿದ್ವಾಂಶರಲ್ಲಿ ಒಬ್ಬರಾದ ಹುಲ್ಲೂರು ಶ್ರೀನಿವಾಸ ಜೋಯಿಷರು ಒಂದೇ ಕಾಲಕ್ಕೆ ಶಾಸನ ಸಾಹಿತ್ಯ, ಭೂಶೋಧನೆ ಸ್ಥಳಪುರಾಣ, ಆಚರಣೆ ಇವೆಲ್ಲವುಗಳ ಜೊತೆ ತೀಜಾಡಿದರು. ಈ ಸಂಪುಟವು ಅವರ ಬಹುಗ್ರಹಿಕೆಯ ಆಸಕ್ತಿಯನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಅವರು ಪ್ರಕಟಿಸಿದ ಅಸಂಖ್ಯ ಲೇಖನಗಳು ಇಂದು ದುರ್ಲಭ. ಅವುಗಳನ್ನು ಇಂದಿನ ಅಧ್ಯಯನ ಉದ್ದೇಶಕ್ಕಾಗಿಯೂ ಚಾರಿತ್ರಿಕ ಅಧ್ಯಯನಕ್ಕೂ ಹೊಸ ಪರಿಪ್ರೇಕ್ಷ್ಯವನ್ನು ನೀಡಲೂ ಇಂಥ ಸಂಪುಟಗಳ ಪ್ರಕಟಣೆ ಅಗತ್ಯವಾಗಿದೆ. ಈ ಸಂಗ್ರಹದಲ್ಲಿ ಅಪೂರ್ವ ಲೇಖನಗಳಿವೆ. ಇವನ್ನು ಬಹು ಗ್ರಹಿಕೆಯ ಸಂಸ್ಕೃತಿ ಕೇಂದ್ರಿತವಾಗಿ ನೋಡಬೇಕು. ಸಂಪಾದಕರು ಬರೆದಿರುವ ಟಿಪ್ಪಣಿಗಳು ಉಪಯುಕ್ತವಾಗಿವೆ. ಇದು ಸುಂದರ ಸಂಪುಟ ಈ ಬಗೆಯ ಸಂಪುಟಗಳು ಕಪಟರಾಳ ಕೃಷ್ಣರಾಯ ಮೊದಲಾದವರ ಬಗೆಗೂ ಬರಬೇಕಾಗಿದೆ. ಅಂಥ ಸಮಗ್ರ ಹೊತ್ತುಗೆಗಳು ಬಂದಾಗ ಕನ್ನಡ ಸಂಸ್ಕೃತಿಯ ಮೂಲ ಮುಡುಕುಗಳಿಗೆ ನೂರಾರು ದೀಪಗಳನ್ನು ಹಚ್ಚುವಂತಾಗುತ್ತದೆ. ಇಂಥ ದೀಪಗಳ ಬೆಳಕಿನಲ್ಲಿ ನಮ್ಮ ಗ್ರಹಿಕೆಗಳು ಹೊಸದಾಗುತ್ತವೆ. ಸಂಪಾದಕರ ಶ್ರಮವನ್ನು ಪ್ರಕಟಿಸಿದವರ ಶ್ರದ್ಧೆಯನ್ನೂ ಕನ್ನಡ ಜನತೆ ಕೃತಜ್ಞತೆಯಿಂದ ಸ್ಮರಿಸಿಕೊಳ್ಳಬೇಕಾಗಿದೆ.

This volume containing a collection of writing of the well known historian of Karnataka the late Hulur Srinivas Jois on his research work in the history and literary heritage of Karnataka superim posed by a peep into the Indian historical canvas, the contribution of the late Jois to history writing is Monumental the articales are a tribute to the depth of jois reach and the vast range of his interest and commitment to and dimensions of his versatile scholarship. He was ahead of modern historiography techniques. The readers owe a debt of gratitude to and appreciation of the sterling work put in by the two editors prof, Laxman Telogevi. & Dr.M.V.Srinivas which testifies to their deep and obiding commitiment to the casues of history and the Jois contribution to it.
The Hindu.

**ಅಡಿಟಿಪ್ಪಣಿಗಳು**

1. ಸಂದರ್ಶನ ಡಿ. ಚಂದ್ರಪ್ಪ
2. ಕೆ.ಎಸ್.ರಾಜಣ್ಣ
3. ಪ್ರಜಾಮತ ದೀಪಾವಳಿ ಸಂಚಿಕೆ – 1955
4. ಜ್ಯೋತಿ, ಮೈಸೂರು – 1957
5. ಮಧುಕರ, ಚಿಕ್ಕಮಗಳೂರು – 1959
6. ಸಿಂಧೂರ, ವಾರ್ಷಿಕ ಸಂಚಿಕೆ, ಸಿಂದನೂರು – 1979
7. ಮಸ್ತಾನಿ, ಪದ್ಮ ಪ್ರಕಾಶನ ಬೆಂಗಳೂರು– 1962
8. ರತ್ನಾಕರ, ಅನುವಾದ ಡಾ. ದಕ್ಷಿಣ ಮೂರ್ತಿ, ತುಮಕೂರು – 1965
9. ಎಂ. ಇ. ಶ್ರೀನಿವಾಸ್ ಸಂ.ಸಮರಸ (ಸಂ. ತುಮಕೂರು) 1964
10. ತುಮಕೂರು ಜಿಲ್ಲೆಯ ಬರಹಗಾರರು (ಸಂ. ಎಂ.ಇ. ಶ್ರೀನಿವಾಸ್–1964)
11. ಎಂ.ಇ. ಶ್ರೀನಿವಾಸ್, ರಣಜಿತ್ ಸಿಂಗ್ – 1981
12. ಎಂ.ಇ. ಶ್ರೀನಿವಾಸ್ ಲಕ್ಷ್ಮಣ ತೆಲಗಾವಿ (ಸಂ. ಚಂದ್ರವಳ್ಳಿ, ಚಿತ್ರದುರ್ಗ, 1974)
13. ಹುಲ್ಲೂರು ಶ್ರೀನಿವಾಸ ಜೋಯಿಷರ ಐತಿಹಾಸಿಕ ಲೇಖನಗಳು (ಚಿತ್ರದುರ್ಗ – 1974)
14. ಹುಲ್ಲೂರು ಶ್ರೀನಿವಾಸರ ಸಂಶೋಧನಾ ಲೇಖನಗಳು ಚಿತ್ರದುರ್ಗ (1995)

# ಅಧ್ಯಾಯ –5

## ಸಾಧಕ ಸಾಧನೆ.

ಪ್ರೊ. ಶ್ರೀನಿವಾಸ್ ಅವರು ಹೇಳುವಂತೆ ಅವರಿಗೆ ಇತಿಹಾಸದಲ್ಲಿ ಉನ್ನತವ್ಯಾಸಂಗ ಮಾಡುವ ಉದ್ದೇಶವಿರಲಿಲ್ಲ. ಇಂಗ್ಲೀಷ್, ತತ್ವಶಾಸ್ತ್ರ , ರಾಜ್ಯಶಾಸ್ತ್ರ ಹೀಗೆ ಹಲವು ವಿಷಯಗಳ ಬಗ್ಗೆ ವಿಶೇಷ ಬಲವಿದ್ದಿತು. ಆದರೆ ಮಹಾರಾಜ ಕಾಲೇಜಿನಲ್ಲಿ ಅಭ್ಯಾಸ ಮಾಡುವಾಗ ಅವುಗಳನ್ನೆಲ್ಲ ಅಧ್ಯಯನ ಮಾಡುವ ಕಾರ್ಯ ಸಿಕ್ಕಿತು. ತಮ್ಮ ಮುಖ್ಯವಿಷಯ ಚರಿತ್ರೆಯನ್ನು ಅಧ್ಯಯನಮಾಡುವುದರ ಜೊತೆಗೆ ಸಾಹಿತ್ಯ, ಮನಶಾಸ್ತ್ರ, ತತ್ವಶಾಸ್ತ್ರ ಮೊದಲಾದ ವಿಷಯಗಳ ಕರತಲಮಲಕವಾಗಿ ಅಭ್ಯಾಸ ಮಾಡಿದರು. ಆ ವಿಷಯವನ್ನು ಮಾಡುತ್ತಿದ್ದ ವಿದ್ಯಾರ್ಥಿಗಳ ಬಳಿ ಚರ್ಚೆ ಮಾಡಿ ಹೆಚ್ಚು ಹೆಚ್ಚು ವಿಷಯವನ್ನು ತಿಳಿದುಕೊಳ್ಳಲು ಪ್ರಯತ್ತಿಸುತ್ತಿದ್ದರು. ಮನೋವಿಜ್ಞಾನದ ಬಗ್ಗೆ ಪುಸ್ತಕಗಳನ್ನು ಓದಿಕೊಂಡು ಪ್ಯಾರಾಸೈಕಾಲಜಿ (Para psychology) ವಿಷಯ ಕುರಿತ ಪ್ರಯೋಗಗಳಲ್ಲಿ ಆಸಕಿ ತೋರಿಸುತ್ತಿದ್ದರು.[1] ಕಲಾವಿದ ಪಿ.ಆರ್.ತಿಪ್ಪೇಸ್ವಾಮಿ ಅವರ ಜತೆ ಚಿತ್ರಕಲೆಯನ್ನು ಕಲಿಯಲು ಪ್ರಯತ್ತಿಸಿದರು ಚಿತ್ರಬಿಡಿಸಲು ಪ್ರಯತ್ತಿಸಿ ಅದು ತಮ್ಮ ಕೈಯಿಂದ ಆಗುವುದಿಲ್ಲವೆಂದುಕೊಂಡು ಸುಮ್ಮನಾದರು. ದೆಹಲಿ ಐ.ಎಸ್.ಐ.ಎಸ್ ಈಗಿನ ಜವಹರ್ ಲಾಲ್ ನೆಹರು ವಿಶ್ವವಿದ್ಯಾಲಯದ ಮೂಲಕ ಸಂಸ್ಥೆಯಲ್ಲಿ ಉನ್ನತವ್ಯಾಸಂಗಮಾಡಲು ಹೋದಾಗ ಅವರಿಗೆ ತಮ್ಮ ಜ್ಞಾನಭಂಡಾರವನ್ನು ತುಂಬಿಕೊಳ್ಳಲು ಒಳ್ಳೆಯ ಅವಕಾಶ ಸಿಕ್ಕಿತು. ಏಷ್ಯಾದ ಅತಿದೊಡ್ಡ ಪುಸ್ತಕ ಬಂಡಾರ ಇದ್ದದ್ದು ವಿಶ್ವವಿದ್ಯಾನಿಲಯದ ಕೇಂದ್ರವಾದ ಸಪ್ರುಹೌಸ್‌ನಲ್ಲಿ ಬೆಳಿಗ್ಗೆ 8 ರಿಂದ ರಾತ್ರಿ 8ರ ವರೆಗೆ ಅಲ್ಲಿದ್ದ ವಿವಿಧ ವಿಷಯಗಳನ್ನು ಕುರಿತು ಗ್ರಂಥ ಓದುತಿದ್ದರು, ಸಮಯ ಕಳೆದದ್ದು ಗೊತ್ತಾಗುತ್ತಿರಲಿಲ್ಲ. ಕಡೆಗೆ ಮಾರ್ಗದರ್ಶಕರು ಒಂದು ಬಾರಿ ನಿಮ್ಮ ವಿಷಯದ ಪುಸ್ತಕಗಳನ್ನು ಓದುತ್ತಾ ಹೋಗಿ ಎಂದು ಎಚ್ಚರಿಸಿದ್ದರು[2]. ಆದರೆ ಮೊದಲಿನಿಂದಲೂ ಶ್ರೀನಿವಾಸ್ ಅವರಿಗೆ ಪದವಿ ಬಡ್ತಿಗಿಂತ ಮೊದಲಾದ ಅನುಕೂಲಕರ ಜ್ಞಾನರ್ಜನೆ ಹೆಚ್ಚು ಮುಖ್ಯವಾಗಿದ್ದಿತು. ಪ್ರತಿದಿನವೂ ತಾವು ಕಲಿಯಬೇಕಾದದ್ದು ಬಹಳವಿದೆ ಎಂದು ಅಭ್ಯಾಸದಲ್ಲಿತೊಡಗಿ ರಾತ್ರಿವೇಳೆಗೆ ಇಂದು ಕಲಿಯಲು ಸಾಧ್ಯವಾದದ್ದು ಇಷ್ಟೆ ಎಂದು ಮುಂದಿನ ದಿನವನ್ನು ಎದುರು ನೋಡುತ್ತಿದ್ದರು.

## ಹೃದಯವಂತ ಮೇಷ್ಟ್ರು

ತಮ್ಮ ಜೀವನದ ಬಹುಭಾಗವನ್ನೆಲ್ಲಾ ಪಾಠವನ್ನು ಬೋಧಿಸುತ್ತಾ ಕಳೆದ ಪ್ರಾಧ್ಯಾಪಕ ಶ್ರೀನಿವಾಸ ಅವರು ತಾವು ಅಧ್ಯಾಪಕರಾಗಬಹುದೆಂದು ಊಹಿಸಿರಲಿಲ್ಲ. ತಾವು ಉನ್ನತ ವ್ಯಾಸಂಗವನ್ನು ಕೈಗೋಳ್ಳಬಹುದೆಂದು ಅವರು ನಿರೀಕ್ಷಿಸಿಯೂ ಇರಲಿಲ್ಲ ಇಂಟರ್ ಮೀಡಿಯೇಟ್ ಆದ ಮೇಲೆ ಯಾವುದಾದರೂ ಸಣ್ಣ ಕೆಲಸಕ್ಕೆ ಹೋಗಬೇಕಾಗಬಹುದು ಎಂದು ಕೋಳ್ಳುತ್ತಿದ್ದಾಗ ಇಂಟರ್ ಮೀಡಿಯೇಟ್‌ನಲ್ಲಿ ರ‍್ಯಾಂಕ್ ಲಭಿಸಿದ್ದರಿಂದ ಅವರ ಅಣ್ಣನವರ ಸಲಹೆಯಂತೆ, ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಆನರ್ಸ್ ಮತ್ತು ಎಂ.ಎ ಪದವಿ ವ್ಯಾಸಂಗ ಮಾಡಿ ಹೊರಬಂದಾಗ ಅವರ ಕೈಯಲ್ಲಿದ್ದುದು ಡಿಗ್ರಿ ಸರ್ಟಿಫಿಕೇಟ್ ಮಾತ್ರವಲ್ಲ ಜೊತೆಗೆ ರ‍್ಯಾಂಕ್ ಗಳಿಸಿದ ಸರ್ಟಿಫಿಕೇಟ್ ಮತ್ತು ಐದು ಚಿನ್ನದ ಪದಕಗಳು. ಅವುಗಳನೆಲ್ಲ ಬೆಂಗಳೂರಿನ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕರಾಗಿ ನೇಮಕವಾಯಿತು. ಅಧ್ಯಯನದಲ್ಲಿ ಮುಂದೆ ಇದ್ದದ್ದು ಸರಿ ಬೋಧನೆಗೆ ವಿಷಯದ ಜ್ಞಾನದೊಂದಿಗೆ ಭಾಷಾ ಪ್ರೌಡಿಮೆ ವಾಕ್ ಚಾತುರ್ಯ, ವಿದ್ಯಾರ್ಥಿಗಳನ್ನುನಿಗ್ರಹಿಸುವ ಸಾಮರ್ಥ್ಯ ಇವೆಲ್ಲಾ ಬಹುಮುಖ್ಯ ಹೀಗೆ ಅಳುಕುತ್ತ ಅಂಜುತ್ತ ತರಗತಿಯಹನ್ನು ಪ್ರವೇಶಿಸಿ

ಮಾತನಾಡಲು ಪ್ರಾರಂಭಿಸಿದಾಗ ಪಾಠಮಾಡುವುದು ಅಷ್ಟು ಕಷ್ಟವಲ್ಲವೆನಿಸಿತು. ಆರ್.ಸಿ ಕಾಲೇಜಿನ ವಿದ್ಯಾರ್ಥಿಗಳು ಸ್ವಲ್ಪ ಜೂಟಿ ಆದರೆ ಸ್ವಲ್ಪ ತುಂಟಾಟದವರು. ಅವರನ್ನು ನಿಗ್ರಹಿಸಿ ಪಾಠಮಾಡುತ್ತಾ ಹೋದಾಗ ಯಶಸ್ವಿ ಅಧ್ಯಾಪಕನಾಗುವ ಮಾರ್ಗದಲ್ಲಿ ಸಾಗುತ್ತಿದೆನೆಂದು ಅನಿಸಿತು[3], ಕಾಲೇಜು ಶಿಕ್ಷಣ ಇಲಾಖೆಯ ವಿವಿಧ ಕಾಲೇಜುಗಳಲ್ಲಿ ಪಾಠಮಾಡುತ್ತಾ ಹೋದಾಗ ಇತಿಹಾಸ ಬೋಧಕರಾಗಿ ಮುನ್ನಡೆದಿದ್ದರು ಇವರ ವಿದ್ಯಾರ್ಥಿಗಳಿಗೆ ಈ ಮೇಷ್ಟ್ರು ಪಾಠ ಕೇಳುವುದು ಇಷ್ಟವಾಯಿತು ತಾವು ಇಷ್ಟು ವರ್ಷಗಳ ಓದಿ ಪಡದುಕೊಂಡ ಜ್ಞಾನವನ್ನು ಧಾರೆ ಎರೆಯತೊಡಗಿದರು. ಅಷ್ಟು ಮಾತ್ರವಲ್ಲ ವಿದ್ಯಾರ್ಥಿಗಳಿಗೆ ವಿಷಯದಲ್ಲಿ ಆಸಕ್ತಿ ಮೂಡುವಂತೆಮಾಡಿ ಅವರು ಅದನ್ನು ಶ್ರದ್ಧೆಯಿಂದ ಓದುವಂತೆ ಮಾಡಿದರು, ತಮ್ಮಲ್ಲಿದ ಪುಸ್ತಕಗಳನ್ನು ವಿದ್ಯಾರ್ಥಿಗಳಿಗೆ ಕೊಟ್ಟು ಅನೇಕ ಪುಸ್ತಕಗಳನ್ನು ಕಳೆದುಕೊಂಡರು. ಆಗ ಇವರನ್ನು ಸಂಧಿಸಲು ಬರುತ್ತಿದ್ದ ವಿದ್ಯಾರ್ಥಿಗಳಿಗೆ ಗುರುಪತ್ನಿಯವರು ಊರೋಪಚಾರವನ್ನೂ ಮಡುತ್ತಿದ್ದರು. ಒಟ್ಟಿನಲ್ಲಿ ಇವರಿಂದ ವಿದ್ಯಕಲಿತು ತಯಾರಾದ ವಿದ್ಯಾರ್ಥಿಗಳು ಉನ್ನತ ಹುದ್ದೆಗಳಲ್ಲಿದ್ದು ತಮ್ಮ ಗುರುಗಳ ಅಪಾರಜ್ಞಾನವನ್ನು ಔದಾರ್ಯವನ್ನೂ ಕೃತಜ್ಞತೆಯಿಂದ ಸ್ಮರಿಸಿಕೊಳ್ಳುತ್ತಾರೆ[4]. ಕೆಲಮೊಮ್ಮೆ ಹಳೆಯ ವಿದ್ಯಾರ್ಥಿಗಳು ಶ್ರೀನಿವಾಸ್ ಅವರನ್ನು ಸಂಧಿಸಿ ನಿಮ್ಮಿಂದ ನಾವು ವಿದ್ಯೆಕಲಿತು ಒಳ್ಳೆಯ ನೌಕರಿಯಲ್ಲಿದ್ದೇವೆ ಎಂದು ಎದೆತುಂಬಿ ಹೇಳಿದಾಗ ಹಾಗೇನೂ ಇಲ್ಲ. ನಾನು ಸಂಬಳತೆಗೆದುಕೊಳ್ಳತ್ತೇನೆ ಪಾಠ ಮಾಡ್ತಿನಿ ನಿಮಗೆ ಒಳ್ಳೆಯದಾಗಿದ್ದರೆ ಸಂತೋಷ ಎಂದು ಅವರನ್ನು ಸಮಾಧಾನಪಡಿಸುತ್ತಿದ್ದರು.[5]

ಇನ್ನು ಅವರ ಬಳಿ ಪಿಹೆಚ್.ಡಿ ಸಂಶೋಧನೆ ಮಾಡಿದ ವಿದ್ಯಾರ್ಥಿ ವಿದ್ಯಾರ್ಥಿನಿಯರು ಪದವಿ ಪಡೆದುಕೊಂಡ ಮೇಲೂ, ಗುರುಗಳನ್ನು ಗೌರವದಿಂದ ನೋಡಿಕೊಂಡು ಸಂಶೋಧನೆ, ಲೇಖನ ಬರವಣಿಗೆ ಬಗ್ಗೆ ಅವರಿಂದ ಮಾರ್ಗದರ್ಶನ ಪಡೆದುಕೊಳ್ಳುತ್ತಿದ್ದರು. ತರಗತಿಯಲ್ಲಿ ಇವರ ಶಿಷ್ಯರಾಗಿದ್ದವರು ಮಾತ್ರವಲ್ಲ ಇತರ ವಿಷಯಗಳಲ್ಲಿ, ವಿವಿಧ ತರಗತಿಗಳಲ್ಲಿ ಅಭ್ಯಾಸ ಮಾಡುವವರೂ ಅವರ ಬಳಿ ಬಂದು ವಿಚಾರವಿನಿಮಯ, ಮಾರ್ಗದರ್ಶನ ಪಡೆದು ಅವರನ್ನು ಗುರುಸ್ಥಾನದಲ್ಲಿಟ್ಟು ಗೌರವಿಸುತ್ತಿದ್ದರು[6].

**ಬಹುಭಾಷಾ ತಜ್ಞ**

ಪ್ರೊ.ಎಂ.ವಿ.ಶ್ರೀನಿವಾಸ್ ಅವರ ಅಪರಿಮಿತ ಜ್ಞಾನದಾಹಕ್ಕೆ ಅವರ ವಿವಿಧ ಭಾಷೆಗಳ ಕಲಿಕೆ ಸಾಕ್ಷಿಯೆನ್ನಬಹುದು. ಶಾಲಾ ಕಾಲೇಜುಗಳಲ್ಲಿ ಪ್ರಥಮ ಭಾಷೆ ದ್ವಿತೀಯ ಭಾಷೆ ಇವುಗಳನ್ನು ಕಷ್ಟಪಟ್ಟು ಕಲಿತರೆ ಕೃತಾರ್ಥರಾದವೆಂದು ಅನೇಕ ವಿದ್ಯಾರ್ಥಿಗಳು ಭಾವಿಸುತ್ತಾರೆ. ಆದರೆ ಶ್ರೀನಿವಾಸ ಅವರು ಈ ಕಡ್ಡಾಯವಾದ ಎರಡು ಭಾಷೆಗಳ ಕಲಿಕೆಗೆ ತೃಪ್ತರಾಗದೆ, ಹಲವು ಭಾಷೆಗಳನ್ನು ಕಲಿಯಲಾರಂಭಿಸಿದರು. ಮನೆಯ ಮಾತು ತೆಲುಗು ಇನ್ನು ಕನ್ನಡದೊಂದಿಗೆ ಸಂಸ್ಕೃತವನ್ನು ಶಾಲೆ ಕಾಲೇಜುಗಳಲ್ಲಿ ಕಲಿತರೆ, ಹಿಂದಿ ಪರ್ಶಿಯನ್ ಉರ್ದು, ಪ್ರೆಂಚ್, ಮರಾಠಿ, ತಮಿಳು ಭಾಷೆಗಳನ್ನು ಸ್ವಂತ ಪರಿಶ್ರಮದಿಂದ ಕಲಿತುಕೊಂಡರು. ತಾವು ಓದಿದ್ದು ಹಳ್ಳಿಯ ಶಾಲೆಯಲ್ಲಿ ತಂದೆತಾಯಿಯವರು ಹೆಚ್ಚು ಓದಿದವರಲ್ಲ. ದೊರೆತ ಅಲ್ಪ ಅವಕಾಶದಲ್ಲಿ ಅವರು ತಮ್ಮ ಪಠ್ಯಕ್ರಮದ ವಿಷಯವಲ್ಲದೆ ಹಲವು ಭಾಷೆಗಳನ್ನು ಕಲಿಯುತ್ತಾ ಹೋದರು. ಮಹಾರಾಜ ಕಾಲೇಜಿನಲ್ಲಿ ಓದುತ್ತಿರುವಾಗ ಫ್ರೆಂಚ್ ಡಿಪ್ಲೊಮಾ ತರಗತಿಗೆ ಹೋಗಿ ಫ್ರೆಂಚ್ ಕಲಿತರು ಪ್ರೊ. ಮೀರ್ ಮಹಮದ್ ಹುಸೇನ್ ಅವರಿಂದ ಪರ್ಶಿಯನ್ ಕಲಿತರು. ಅದಕ್ಕೆ ಮೊದಲೇ ಉರ್ದು ಮತ್ತು

ಹಿಂದಿ ಭಾಷೆಗಳನ್ನು ಕಲಿತುಕೊಂಡರು.[25] ಅವರ ಇಂಗ್ಲೀಷ್ ಭಾಷೆಗೆ ಪ್ರೌಢಶಾಲೆಯ ಇಂಗ್ಲೀಷ್ ವ್ಯಾಕರಣ ಬೋಧನೆ ಆ ಭಾಷೆಯ ಮೇಲೆ ಸಾಕಷ್ಟು ಪ್ರಭುತ್ವವನ್ನು ಹೊಂದಲು ಸಾಧ್ಯವಾಯಿತೆಂದು ಅವರೇ ಹೇಳುತ್ತಾರೆ. ಇಂಟರ್ ಮೀಡಿಯೇಟ್ ವ್ಯಾಸಂಗ ಮಡುತ್ತಿದ್ದಾಗ ಇಂಗ್ಲೀಷ್ ಕಾದಂಬರಿ ನಾಟಕಗಳನ್ನು ಓದುವ ಅಭ್ಯಾಸ ಮಾಡಿಕೊಂಡಿದ್ದರು. ಇತಿಹಾಸದ ಆನರ್ಸ್ ಓದುವಾಗ ಪ್ರಥಮ ಭಾಷೆ ಇಂಗ್ಲೀಷ್ ಅಭ್ಯಾಸ ಮಾಡುವಾಗ ಷೇಕ್ಸ್ ಪಿಯರ್ ಕುರಿತ ವಿಮರ್ಶೆ ಹಾರ್ಡಿ ಮೊದಲಾದವರ ಕಾದಂಬರಿಗಳನ್ನು ಆಸಕ್ತಿಯಿಂದ ಅವುಗಳ ಬಗ್ಗೆ ಲೇಖನ ವಿಮರ್ಶೆಗಳನ್ನು ಬರೆದಿದ್ದರು ಇವರ ಭಾಷೆ ಅಭ್ಯಾಸವನ್ನು ನೋಡಿ, ಇತಿಹಾಸ ವಿಭಾಗದ ಹಿರಿಯ ಸಹಪಾಠಿಗಳು "ನೀನು ಓದಬೇಕಾದದ್ದು ಚರಿತ್ರೆ, ಭಾಷೆಗಳಲ್ಲಿ 35 ಅಂಕ ಬಂದರೆ ಸಲಕು ಅನವಶ್ಯಕವಾಗಿ ಏನೇನೋ ಓದಬೇಡ" ಎಂದು ಗದ್ದರಿಸಿದ್ದರು. ಆದರೆ ಇತಿಹಾಸದಲ್ಲೂ ಅವರು ಆಳವಾಗಿ ಅಭ್ಯಾಸ ಮಾಡಿ ರ್‍ಯಾಂಕ್ ಗಳಿಸಿದ್ದುದು ಅವರಗೂ ತಿಳಿದಿದ್ದಿತು. ಮರಾಠಾ ಇತಿಹಾಸ ಅವರು ಓದುತ್ತಿರುವಾಗ ಒಂದು ವಿಷಯವಾಗಿದ್ದಿತು ಮೂಲದಾಖಲೆಗಳನ್ನು ಪರಿಶೀಲಿಸುವ ದೃಷ್ಠಿಕಾರಿಯಾದ ಮರಾಠಿಯನ್ನು ಕಲಿತರು. "ಇಷ್ಟೊಂದು ಭಾಷೆಗಳನ್ನು ಹೇಗೆ ಕಲಿತಿರಿ ಎಂದು ಸ್ನೇಹಿತರು ಪ್ರಶ್ನಿಸಿದಾಗ ನಮ್ಮ ಪ್ರಾಧ್ಯಾಪಕರು 30 ಭಾಷೆಗಳಲ್ಲಿ ತಜ್ಞರು ನಾನು ಕಲಿಯುವುದು ಇನ್ನೂ ಬಹಳ ಇದೆ" ಎಂದು ಸಮಾಧಾನದಿಂದ ಉತ್ತರ ಕೊಡುತ್ತಿದ್ದರು[8].

**ಸಂಘ – ಸಂಘಟನೆ:**

ಎಂ.ವಿ. ಶ್ರೀನಿವಾಸ್, ಅವರು ಇತಿಹಾಸ ಪ್ರಾಧ್ಯಾಪಕರಾಗಿ ಲೇಖಕರಾಗಿ, ವಿದ್ವಾಂಸರಾಗಿ ಶೈಕ್ಷಣಿಕ ಕ್ಷೇತ್ರದಲ್ಲಿ ಖ್ಯಾತಿಪಡೆದಿದ್ದರೂ ಅವರ ಪ್ರಮುಖವಾದ ಕೊಡುಗೆ ಎಂದರೆ ಅವರು ಸ್ಥಾಪಿಸಿ ಮುನ್ನಡೆಸಿ ಶೈಕ್ಷಣಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕ ಸಂಘ ಸಂಸ್ಥೆಗಳು. ಅವುಗಳ ಮೂಲಕ ಅವರು ಇತಿಹಾಸ ಸಾಹಿತ್ಯ ಮೊದಲಾದ ವಿಷಯಗಳು ಬೆಳೆಯುವುದಕ್ಕೆ ಅವಕಾಶ ಮಾಡಿಕೊಟ್ಟರು, ಜೊತೆಗೆ ತಾವೂ ಬೆಳೆದರು, ಇತರರನ್ನೂ ಬೆಳೆಸಿದರು. ಬಹು ಸಣ್ಣವಯಸ್ಸಿನಿಂದಲೇ ಇವರು ವಿವಿಧ ಸಂಘಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದರು, ಶಾಲೆ ಕಾಲೇಜುಗಳಲ್ಲಿ ಓದುತ್ತಿರುವಾಗಲೇ ಕರ್ನಾಟಕ ಸಂಘ. ಗ್ರಾಮ ಯುವಕ ಸಂಘಗಳನ್ನು ಸ್ಥಾಪಿಸಿ ಉತ್ಸಾಹದಿಂದ ಕೆಲಸಮಾಡಿದರು, ಶ್ರೇಷ್ಠ ಆದರ್ಶ, ಉದಾತ್ತಧ್ಯೇಯಗಳಿಂದ ಕೂಡಿದ್ದ ಈ ಸಂಘಗಳು ಸಾಧಿಸಿದ್ದು ಕಡಿಮೆ ಆದರೆ ಸಮರ್ಥ ವ್ಯಕ್ತಿಗಳನ್ನು ಪ್ರತಿಭಾವಂತರನ್ನು ಒಂದೆಡೆ ಸೇರಿಸಬೇಕು, ಏನನ್ನಾದರೂ ಸಾಧಿಸಬೇಕು ಎನ್ನುವ ಛಲ ಮಾಯವಾಗಲಿಲ್ಲ. ಸಂಘಗಳು ಹೇಳ ಹೆಸರಿಲ್ಲದಂತೆ ಮಾಯವಾದರೂ ಅದರ ಹಿಂದಿನ ಧ್ಯೇಯ ಗುರಿ ಎಂದಿಗೂ ಮರೆಯಾಗಲಿಲ್ಲ. ಶ್ರೀನಿವಾಸ್ ಅವರು ಸ್ಥಾಪಿಸಿ ಒಳ್ಳೆಯ ಕೆಲಸ ಮಾಡಿದ ಕೆಲವು ಸಂಸ್ಥೆಗಳ ಚಟುವಟಿಕೆಗಳನ್ನು ಗಮನಿಸಿದರೆ, ಅವರ ಕೊಡುಗೆಯನ್ನು ತಿಳಿಯಲು ಸಾಧ್ಯವಾಗುತ್ತದೆ. ಕಾಲೇಜಿನಲ್ಲಿ ಅಧ್ಯಾಪಕರಾಗಿ ವೃತ್ತಿಯನ್ನು ಆರಂಭಿಸಿದಾಗ, ಪ್ರಾಶಃ ವಯಸ್ಸು 24 ಆಗಿರಬೇಕು. ಏನನ್ನಾದರೂ ಮಾಡಬೇಕು ಎನ್ನುವ ಹುರುಪು ಉತ್ಸಾಹ, ಹಂಬಲ ಕಾಡುತ್ತಿತ್ತು ಚಿಕ್ಕಮಗಳೂರಿನ ಆಗಿನ ಇಂಟರ್ ಮೀಡಿಯೇಟ್ ಕಾಲೇಜಿನಲ್ಲಿ ಇತಿಹಾಸದ ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾಗ, ಬೋಧನೆಯೊಂದಿಗೆ ಪಠ್ಯೇತರ ಚಟುವಟಿಕೆಗಳಲ್ಲಯೂ ಆಸಕ್ತಿಯನ್ನು ತೋರಿಸಿದರು, ಕಾಲೇಜಿನ ಸ್ಕೌಟ್ ಸಂಸ್ಥೆಯ ಅಧಿಕಾರಿಯಾಗಿ, ಚಟುವಟಿಕೆಗಳ ಮಹಾಪೂರವನ್ನೇ ಹರಿಸಿದರು. ಸ್ಕೌಟ್ ವಿಭಾಗ ಇದುವರೆಗೂ ನಿರ್ಜೀವರಾಗಿದ್ದಿದ್ದು ಇವರ ನೇತೃತ್ವದಲ್ಲಿ ವಿದ್ಯಾರ್ಥಿ ಜೀವನದಲ್ಲಿ ಸಂಚಲನವನ್ನುಂಟು ಮಾಡಿತು.[9] ನಾಲ್ಕುಗೋಡೆಗಳ ಮಧ್ಯೆ ಪಾಠಕೇಳಿ ಬೋರ್

ಆಗಿದ್ದ, ವಿದ್ಯಾರ್ಥಿಗಳಿಗೆ ಹೊರಗೆ ಪ್ರಕೃತಿ ಮಧ್ಯೆ ಚಟುವಟಿಕೆ ಆಟಪಾಠಗಳು ಖುಷಿಯನ್ನು ತಂದು ಕೊಟ್ಟವು. ಶ್ರೀನಿವಾಸ್, ಇದೇರೀತಿ, ತುಮಕೂರು ಮತ್ತು ಚಿತ್ರದುರ್ಗ ಕಾಲೇಜುಗಳಲ್ಲಿಯೂ ಸ್ಕೌಟ್ ಸಂಸ್ಥೆ ವಿಬಾಗಕ್ಕೆ ಜೀವವನ್ನು ತುಂಬಿ ವಿದ್ಯಾರ್ಥಿಗಳ ಮನೋವಿಕಾಸಕ್ಕೆ ಮನೋರಂಜನೆಗೆ ಕಾರಣರಾದರು.

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಮೈಸೂರಿನ ಹಿರಿಯ ಕಿರಿಯ ಸಾಹಿತಿಗಳ ಸಂಘವನ್ನು ಸ್ಥಾಪಿಸಿಕೊಂಡಿದ್ದರು ಅದರಲ್ಲಿ ಸಹಸಂಚಾಲಕರಾಗಿ ಎಂ.ವಿ.ಎಸ್ ತೊಡಗಿಸಿಕೊಂಡಿದ್ದರು, ತರಾಸು, ಆನಂದ, ಅಡಿಗ ತ್ರಿವೇಣಿ ಮೊದಲಾದವರು ಇದರಲ್ಲಿ ಸದಸ್ಯರಾಗಿ ಪ್ರತಿ ತಿಂಗಳು ಚರ್ಚೆ, ಪುಸ್ತಕ ವಿಮರ್ಶೆಗಳನ್ನು ಮಾಡುತ್ತಿದ್ದರು. ತುಮಕೂರಿನಲ್ಲಿ 1961ರಲ್ಲಿ ಜಿಲ್ಲಾಬರಹಗಾರರ ಸ್ಥಾಪಕ ಕಾರ್ಯದರ್ಶಿಯಾಗಿ ನಗರದಲ್ಲಿ ಸಾಹಿತ್ಯ ಕಾರ್ಯಕ್ರಮಗಳನ್ನು ನಡೆಸುತ್ತಹೋದರು. ಆಗ ಜಿಲ್ಲಾ ಸಾಹಿತ್ಯಪರಿಷತ್ತು ಇನ್ನು ಅಸ್ತಿತ್ವಕ್ಕೆ ಬಂದಿರಲಿಲ್ಲ. ತುಮಕೂರಿನಲ್ಲಿ ಅವರ ನಡೆಸಿದ ಕಾರ್ಯಕ್ರಮ, ಪುಸ್ತಕ ಪ್ರಕಟಣೆ ಇವುಗಳಿಂದ ತುಮಕೂರಿನಲ್ಲಿ ಸಾಹಿತ್ಯದ ಕಂಪು ಮೆರೆಯುವಂತೆ ಮಾಡಿದರು. ಜಿಲ್ಲಾ ಬರಹಗಾರರ ಸಂಘ ಅನೇಕ ಉದಯೋನ್ಮುಕರಿಗೆ ತಮ್ಮ ಕೃತಿಗಳನ್ನು ಹೊರತರಲು ಅವಕಾಶಮಾಡಿಕೊಟ್ಟಿತು, ನಗರದ ವಿವಿದಡೆಗಳಲ್ಲಿ ಗೋಷ್ಠಿಗಳನ್ನು ಸಭೆ ಸಮಾರಂಭಗಳನ್ನು ನಡಡೆಸುವಲ್ಲಿ ಪ್ರೊ.ಶ್ರೀನಿವಾಸ್ ಅವರು ಪ್ರಮುಖ ಪಾತ್ರವನ್ನು ವಹಿಸಿದ್ದರು.[10]

ಇದಾದ ನಂತರ ತುಮಕೂರಿನಲ್ಲಿ ಇತಿಹಾಸ ಸಂಶೋಧನೆ, ಅಧ್ಯಯನ ನಡೆಸುವ ಉದ್ದೇಶದಿಂದ ಇತಿಹಾಸ ಪರಿಷತ್ತು ಎಂಬ ಸಂಸ್ಥೆಯನ್ನು 1970 ಸ್ಥಾಪಿಸಲಾಯಿತು. ಡಾ॥ ಎಂ.ವಿ. ಶ್ರೀನಿವಾಸ್ ಅವರು ಈ ಪರಿಷತ್ತಿನ ಉಪಾಧ್ಯಾಕ್ಷರು ರೇವಣಸಿದ್ದಪ್ಪ ಕಾರ್ಯದರ್ಶಿಗಳು. ಇತಿಹಾಸ ಪರಿಷತ್ತಿನಲ್ಲಿ ತುಮಕೂರು ತಿಪಟೂರು ಕಾಲೇಜುಗಳ ಅಧ್ಯಾಪಕರು ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಹಲವಾರು ಸ್ಮಾರಕಗಳ ಅಧ್ಯಯನ ಸಭೆಗಳನ್ನೂ ಹಾಗೂ ವಿಜಯನಗರ ಇತಿಹಾಸವನ್ನು ಕುರಿತು ರಾಜ್ಯಮಟ್ಟದ ವಿಚಾರ ಸಂಕಿರಣವೆನ್ನು ಆಯೋಜಿಸಲಾಗಿದ್ದಿತು. ಈ ಸಂಸ್ಥೆಯ ಅತ್ಯಂತ ಮಹತ್ವದ ಕೊಡುಗೆಯೆಂದರೆ ಇತಿಹಾಸ ಚಂದ್ರಿಕೆ ಎಂಬ ಮಾಸ ಪತ್ರಿಕೆಯ ಪ್ರಕಟಣೆ. ಆರು ವರ್ಷಗಳ ಕಾಲ ಇತಿಹಾಸ ಚಂದ್ರಿಕೆ ನಾಡಿನ ಇತಿಹಾಸ ಆಸಕ್ತರಿಗೆ ಉಪಯುಕ್ತವಾದ ಮಾಹಿತಿ, ವಿಚಾರ ವಿಮರ್ಶೆಯನ್ನು ನೀಡಿ ಎಲ್ಲ ಮೆಚ್ಚುಗೆಗೆ ಪಾತ್ರವಾಯಿತು.

ಚಿತ್ರದುರ್ಗ ಪ್ರಥಮ ದರ್ಜೆ ಕಾಲೇಜಿಗೆ ವರ್ಗವಾಗಿ ಬಂದುದು ಅವರ ಬಾಳಿಗೆ ಒಂದು ಮಹತ್ವದ ತಿರುವನ್ನು ನೀಡಿತು ಎಂದು ಹೇಳಬಹುದು, ಐತಿಹಾಸಿಕ ಮಹತ್ವವುಳ್ಳ ಚಿತ್ರದುರ್ಗದಲ್ಲಿ ಅವರ ಅನ್ವೇಷಣೆ ಅಧ್ಯಯನ ಸಂಶೊಧನೆಗೆ ಉತ್ತಮ ಅವಕಾಶ ಲಭಿಸಿತು. ಇಲ್ಲಿ ಅವರು ಸ್ಥಾಪಿಸಿದ ಜಿಲ್ಲಾ ಇತಿಹಾಸ ಸಂಶೋಧನ ಮಂಡಳಿ ಚಿತ್ರದುರ್ಗದಲ್ಲಿ ಸ್ಥಳೀಯ ಇತಿಹಾಸದ ಬೆಳವಣಿಗೆಗೆ ಅದ್ಭುತವಾದ ಕೊಡುಗೆಯನ್ನು ನೀಡಿತು. ಈ ಸಂಸ್ಥೆಯಲ್ಲಿ ಇವರ ಜತೆಯಲ್ಲಿ ಅವಿರತವಾಗಿ ಶ್ರಮಿಸಿದವರು ಪ್ರೊ. ಲಕ್ಷ್ಮಣತೆಲಗಾವಿ. ಇತಿಹಾಸ ಸಂಶೋಧನ ಮಂಡಳಿಯು ಚಿತ್ರದುರ್ಗದಲ್ಲಿ ವಿಚಾರಗೋಷ್ಠಿ ಪುಸ್ತಕ ಪ್ರಕಟಣೆ ಭಾಷಣ ಮೊದಲಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು. ಅನೇಕ ಅಧ್ಯಾಪಕರೂ, ಹವ್ಯಾಸಿ ಸಂಶೋಧಕರೂ ಲೇಖಕರು ಅದರಲ್ಲಿ ಭಾಗವಹಿಸುತ್ತಿದ್ದರು, ಈ

ಸಂಸ್ಥೆಯು ಪ್ರಕಟಿಸಿದ ಚಂದ್ರವಳ್ಳಿ ಗ್ರಂಥವು ಸ್ಥಳೀಯ ಇತಿಹಾಸ ಆಸಕ್ತರ ಮೆಚ್ಚುಗೆಗೆ ಪಾತ್ರವಾಯಿತು.ಜಿಲ್ಲಾ ಇತಿಹಾಸ ಸಂಶೋಧನೆ ಮಂಡಳಿಯು ಚಿತ್ರದುರ್ಗದ ಜನರಿಗೆ ಇತಿಹಾಸವನ್ನು ವೈಜ್ಞಾನಿಕವಾಗಿ ಅಭ್ಯಾಸ ಮಾಡುವ ಅರ್ಥಮಾಡಿಕೊಳ್ಳುವ ವಿಧಾನವನ್ನು ಕಲಿಸಿ ಕೊಟ್ಟಿತು. ಇದರೊಂದಿಗೆ. ಹುಲ್ಲೂರು ಜೋಯಿಸ ಗ್ರಂಥ ಪ್ರಕಟಣ, ಸಮಿತಿ, ಚಿನ್ಮಯ ಪ್ರಕಾಶನ ಮೊದಲಾದ ಸಂಸ್ಥೆಗಳಲ್ಲೂ ಶ್ರೀನಿವಾಸ್ ಅವರದು ಅಗ್ರಪಾತ್ರವಾಗಿದ್ದಿತು. ಈ ಸಂಸ್ಥೆಗಳ ಆಶ್ರಯದಲ್ಲಿ ಅವರು 14 ಶ್ರೇಷ್ಠ ಮಟ್ಟದ ಗ್ರಂಥಗಳನ್ನು ಪ್ರಕಟಿಸಿದರು ಈ ಪುಸ್ತಕಗಳನ್ನು ಜನಸಾಮಾನ್ಯರು ಆಸಕ್ತಿಯಿಂದ ಕೊಂಡು ಓದಿ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿದರು. ಚಿಂತನ ಎಂಬ ಮತ್ತೊಂದು ಶೈಕ್ಷಣಿಕ ಸಂಸ್ಥೆಯ ಸ್ಥಾಪಕರಾಗಿ ಪ್ರೊ.ಶ್ರೀನಿವಾಸ್ ಅವರು ಸಾಹಿತ್ಯ ವಿಮರ್ಶೆ ವಿಶ್ಲೇಷಣೆ ನಡೆಯಲು ಒಳ್ಳೆಯ ಅವಕಾಶವನ್ನು ಮಾಡಿಕೊಟ್ಟರು. ಸಾಹಿತ್ಯ ಲೋಕಕ್ಕೂ ಶ್ರೀನಿವಾಸ್ ಅವರಿಗೂ ಅವಿನಾಭಾವ ಸಂಬಂಧ, ಅವರ ಬರವಣಿಗೆಯ ಜೊತೆಯಲ್ಲಿ ಸಾಹಿತಿಗಳ ಜೊತೆ ನಂಟನ್ನು ಬಲಪಡಿಸಿಕೊಳ್ಳುತ್ತಾಹೋಗಿದ್ದಾರೆ. ಕರ್ನಾಟಕ ಲೇಖಕರ ಸಂಘ ನಾಡಿನ ಬಹು ಪ್ರತಿಷ್ಠಿತ ಸಾಹಿತ್ಯಕೂಟ, ಪ್ರೊ.ಶ್ರೀನಿವಾಸ್ ಅವರ ಕರ್ನಾಟಕ ಲೇಖಕರ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ಸಾಹಿತ್ಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.[11]

ಯೋಗಿನಾರಾಯಣ ಇಂಡಾಲಜಿ ಕೇಂದ್ರ ಎಂಬ ಸಾಂಸ್ಕೃತಿಕ ಸಂಸ್ಥೆ 2000 ರಲ್ಲಿ ಎಂ.ಎಸ.ಆರ್ ಸಂಸ್ಥೆಗಳ ಆಶ್ರಯದಲ್ಲಿ ಸ್ಥಾಪನೆ ಯಾಯಿತು ಇಂಡಾಲಜಿ ಎಂದರೆ ಭಾರತೀಯ ಸಂಸ್ಕೃತಿಯ ಅಧ್ಯಯನ. ಸಾಮಾನ್ಯವಾಗಿ ವಿಶ್ವವಿದ್ಯಾನಿಲಯಗಳು ಮಾತ್ರ ಮಾಡುವಂತಹ ಬಹು ಜವಾಬ್ದಾರಿ ಹಾಗೂ ಉನ್ನತ ಮಟ್ಟದ ಬೌದ್ಧಿಕ ಕಾರ್ಯಕ್ರಮದ ಹೊರೆಯನ್ನು ಹೊತ್ತು ಪ್ರೊ.ಎಂ.ವಿ.ಶ್ರೀನಿವಾಸ್ ಅವರು ಐದು ವರ್ಷಗಳ ಕಾಲ ಅದನ್ನು ಅತ್ಯಂತ ಯಶಸ್ವಿಯಾಗಿ ನಡೆಸಿದರು. ಈ ಸಂಸ್ಥೆಯಲ್ಲಿ ಅವರು ಎರಡು ರಾಜ್ಯಮಟ್ಟದ ವಿಚಾರ ಸಂಕಿರಣಗಳನ್ನು ನಡೆಸಿದರು. ಇಂಡಾಲಜಿ ಕೇಂದ್ರದಲ್ಲಿ, ಯೋಗಾಸನ, ಪ್ರವಚನಗಳು ವಿಮರ್ಶೆ ಗ್ರಂಥ ಬಿಡುಗಡೆ ಮೊದಲಾಗಿ ವಾರದಲ್ಲಿ 10 ಚಟುವಟಿಕೆಗಳನ್ನು ನಡೆಸಿ ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಕ್ಕೆ ಗಮನಾರ್ಹ ಸೇವೆ ಸಲ್ಲಿಸಿದರು. ಅವರು ಸಂಪಾದಕರಾಗಿ ಪ್ರಾರಂಭಿಸಿದ ಮಲ್ಲಾರೆ ಮಾಸ ಪತ್ರಿಕೆ ಕನ್ನಡ ನಾಡಿನ ಒಂದು ಶ್ರೇಷ್ಠಮಟ್ಟದ ಸಾಂಸಕೃತಿಕ ಪತ್ರಿಕೆಯಾಗಿ ಸೇವೆ ಸಲ್ಲಿಸುತ್ತಿದೆ.

**ಓದುತ್ತಾ ಓದುತ್ತಾ**

ಪುಸ್ತಕಗಳನ್ನು ಓದುವುದು ಕೆಲವರಿಗೆ ಹವ್ಯಾಸ. ಕೆಲವರಿಗೆ ಅನಿವಾರ್ಯವಾಗಿ ಮಾಡುವ ಅಪ್ರಿಯಕಾರ್ಯ, ಕೆಲವರಿಗೆ ಅದು ದಿನನಿತ್ಯದ ಅವಿಭಾಜ್ಯ ಅಂಗ, ಶ್ರೀನಿವಾಸ್ ಅವರು ಕಡೆಯಲ್ಲಿ ಹೇಳಿದ ಗುಂಪಿಗೆ ಸೇರಿದವರು, ಅವರು ಶಾಲೆಯನ್ನು ಪ್ರವೇಶಿಸಿದ ಕ್ಷಣದಿಂದ ಇಂದಿನ ವರೆಗೂ ಓದುತ್ತಲೇ ಇದ್ದಾರೆ ಪ್ರಾಯಶ ಓದುತ್ತಲೇ ಇರುತ್ತಾರೆ. ಪುಸ್ತಕಗಳು ಅವರ ಸುತ್ತಮುತ್ತ ಹಿಂದೆ ಮುಂದೆ. ಅವರ ಪುಸ್ತಕ ಪ್ರಿತಿ ಬಹು ಚಿಕ್ಕವಯಸ್ಸಿನಿಂದಲೇ ಪ್ರಾರಂಭವಾಯಿತಂತೆ. ಅವರು ಮಾಧ್ಯಮಿಕ ಶಾಲೆಯಲ್ಲಿ ಓದುತಿದ್ದಾಗ ವಾರಕ್ಕೆ ಒಂದುಬಾರಿ ಅವರಿಗೆ ಓದಲು ಕತೆ ಪುಸ್ತಕಗಳನ್ನು ಕೊಡುತ್ತಿದ್ದರು. ಆದಿನ, ಆ ಗಳಿಗೆಗಾಗಿ ಅವರು ಕಾಯುತ್ತಿದ್ದಂರಂತೆ. ಸ್ಕೂಲಿನ ಮುಖ್ಯೋಪಾಧ್ಯರ ಕೊಠಇ ಒಂದು ಮರದಪೆಟ್ಟಿಗೆಯಲ್ಲಿ ಈ ಪುಸ್ತಕಗಳನ್ನು ಇಡುತ್ತಿದ್ದರು. ಅವರ ಪಾಲಿಗೆ ಅದೊಂದು ಚಿನ್ನದ ಗಣಿ ಅಮೂಲ್ಯ ರತ್ನಭಂಢಾರ. ಮೇಷ್ಟ್ರು ಒಮ್ಮೊಮ್ಮೆ ಮರೆತರೆ ಅವರನ್ನು ಕಾಡಿಬೇಡಿ

ಒಂದು ಕತೆ ಪುಸ್ತಕವನ್ನುಪಡೆದು ಅದನ್ನು ಅತ್ಯಂತ ಕುತುಹಲದಿಂದ ಓದುತ್ತಿದ್ದರು.[24] ಆ ಮರದ ಪೆಟ್ಟಿಗೆಯೊಂದೇ ಶ್ರೀನಿವಾಸ್ ಅವರಿಗೆ ಸಾಹಿತ್ಯ ಲೋಕದ ಏಕೈಕ ಸಂಪರ್ಕಸಾಧನ, ಮನೆಯಲ್ಲಿ ಪುಸ್ತಕಗಳನ್ನು ಕೊಳ್ಳುವುದಕ್ಕಾಗಲೀ, ಬೇರೆಡೆಯಿಂದ ತರುವುದಕ್ಕಾಗಲೀ ಅನುಕೂಲವಿರಲಿಲ್ಲ. ಹೀಗೆ ಶಾಲೆಯ ಗ್ರಂಥಭಂಡಾರಗಳಲ್ಲಿನ ಪುಸ್ತಕಗಳನ್ನು ಓದುತ್ತ ಸಾಹಿತ್ಯ ಪ್ರಪಂಚಕ್ಕೆ ಪಾದಾರ್ಪಣೆ ಮಾಡಿದರು. ಹೈಸ್ಕೂಲ್ ವಿದ್ಯಾಭ್ಯಾಸ ಮುಗಿಸಿ ಕಾಲೇಜಿಗೆ ಬಂದಾಗ ಓದುವುದಕ್ಕೆ ವಿಪುಲ ಅವಕಾಶಗಳು ದೊರೆತವು ಇತಿಹಾಸ, ತತ್ವಶಾಸ್ತ್ರ ಸಾಹಿತ್ಯಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಓದುತ್ತಾ ಹೋದಂತೆ ಅವರಿಗೆ ಇನ್ನು ಹೆಚ್ಚು ಪುಸ್ತಕಗಳಿದ್ದು ಓದಬೇಕೆನಿಸಿತಂತೆ. ಅವರ ಅಧ್ಯಾಪಕರ ಬಳಿ ಹೋಗಿ ನಾನು ಲೈಬ್ರರಿಯಲ್ಲಿರುವ ಪುಸ್ತಕಗಳನ್ನೆಲ್ಲಾ ಓದಿದ್ದಾಯಿತು. ಮತ್ತಿನ್ನೇನು ಓದಬೇಕು" ಎಂದು ಹೇಳಿದರಂತೆ ಆಗ ಅಧ್ಯಾಪಕ ಪುಸ್ತಕಗಳನ್ನೆಲ್ಲಾ ಏಕೆ ಓದುವುದಕ್ಕೆ ಹೋದೆ. "ನಾನು ಅವನ್ನೆಲ್ಲಾ ಓದಿಲ್ಲ. ಸಾಕು ಈಗ ಓದಿದ್ದು ಎಂದು ಹೇಳಿಕಳುಹಿಸಿದರು. ಇಂಟರ್ ಮಿಡಿಯೇಟ್ ಪರೀಸಕ್ಷೆ ತೇರ್ಗಡೆಯಾಗಿ ಮೈಸೂರು ವಿಶ್ವವಿದ್ಯಾನಿಲಯವನ್ನು ಪ್ರವೇಶಿಸಿದಾಗ ಮೇಯುವ ಮೇಕೆ ತೋಟದಿಂದ ಕಾಡನ್ನು ಪ್ರವೇಶಿಸಿದಂತಾಯಿತು. ಇತಿಹಾಸದೊಂದಿಗೆ ಸಾಹಿತ್ಯ, ವಿವಿಧ ವಿಷಯಗಳನ್ನು ಓದುತ್ತಾ ಹೋದಾಗ ಸಮಯ ಸಾಕಾಗಲಿಲ್ಲ. ಶ್ರೀನಿವಾಸ್ ಅವರಂತೆ ಸದಾ ಕಾಲೇಜಿನ ಲೈಬ್ರರಿಯಲ್ಲಿ ಪುಸ್ತಕಗಳನ್ನು ಓದುತ್ತಿದ್ದ ನಾರಾಯಣ್ ಮುಂದೆ ಅವರು ಬೆಂಗಳುರಿ ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಸವಿವೆ ಸಲ್ಲಿಸಿದರು ಅವರು ಮಹಾರಾಜಾ ಕಾಲೇಜು ಲೈಬ್ರರಿಯನ್ ಬಳಿ ಹೋಗಿ ರಾತ್ರಿಹೊತ್ತು ಲೈಬ್ರರಿಯಲ್ಲಿಕುಳಿತು ಓದಲು ಅನುಮತಿಕೊಡಬೇಕೆಂದು ಕೋರಿದರು.[12] ಆದರೆ ಕೆಲವು ತಾಂತ್ರಿಕ ಮತ್ತತರ ಕರಣಗಳಿಂದ ಆರಿತಿ ಅನುಮತಿ ನೀಡಲಾಗುವುದಿಲ್ಲವೆಂದು ತಿಳಿಸಿದರು. ಹಾಗೆ ಆನರ್ಸ್ ಎಂ.ಎ ಓದಿದ್ದಾಯಿತು ಪರೀಕ್ಷೆ ಮುಗಿದು ಹಿರೇಹಳ್ಳಿಗೆ ಹಿಂದಿರುಗಿದರು. ಊರಿನಲ್ಲೂ ಓದುವುದು ಮುಂದುವರೆಯಿತು. ತಮ್ಮ ಹೊಲಗದ್ದೆಯ ಬಳಿಹೋಗಿ ಅಲ್ಲಿ ಓದುತ್ತ ಕುಳಿತುಕೊಳ್ಳುತ್ತಿದ್ದರು. ಊರಿನ ಕೆಲವು ಜನರಿಗೆ ಒಂದು ಅನುಮಾನ ಕಾಡಲಾರಂಭಿಸಿತು. ಶ್ರೀನಿವಾಸ್ ಅವರ ತಾಯಿ ಪಾರ್ವತಮ್ಮನವರ ಬಳಿ ಹೋಗಿ ಕೇಳಿದರು ನಿಮ್ಮ ಹುಡುಗ ಎಂ.ಎ. ಓದಿದ್ದಾಯಿತು ಇನ್ನು ಪುಸ್ತಕಗಳನ್ನು ಏಕೆ ಓದುತ್ತಿದ್ದಾನೆ? ಅವರಿಗೆ ಪಾಪ ಹುಡುಗ ಪರೀಕ್ಷೆಯಲ್ಲಿ ಫೇಲಾಗಿರಬಹುದು ಅದಕ್ಕೆ ಓದುತ್ತಿರಬಹುದು ಎಂದು ಅನಿಸಿತು. ಆದರೆ ಶ್ರೀನಿವಾಸ ಅವರು ಪುಸ್ತಕಗಳನ್ನು ಓದುತ್ತಿದ್ದುದು ಪರೀಕ್ಷೆಯಲ್ಲಿ ಅಂಕಗಳಿಸುವುದಕ್ಕೆ ಮಾತ್ರವಲ್ಲ. ಜೀವನದ ಪರೀಕ್ಷೆಯನ್ನು ಎದುರಿಸುವುದಕ್ಕೆ ಎನ್ನುವುದು ಆ ಮುಗ್ಧ ಜನರಿಗೆ ತಿಳಿದಿರಲಿಲ್ಲ.

ದೆಹಲಿಯ ಸಪ್ರು ಹೌಸ್ ನಲ್ಲಿದ್ದ ಅಂತರರಾಷ್ಟ್ರಿಯ ಅಧ್ಯಯನ ಸಂಸ್ಥೆಯಲ್ಲಿ ಸಂಶೋಧನೆ ಮಾಡಲು ಹೋದಾಗ ಶ್ರೀನಿವಾಸ್ ಅವರು ಓದುವುದಕ್ಕೆ ಅನಂತ ಅದು ಅವಕಾಶಗಳನ್ನು ನೀಡಿತು. ಏಷ್ಯದಲ್ಲಿ ಅತಿದೊಡ್ಡದಾದ ಈ ಗ್ರಂಥಾಲಯದದಲ್ಲಿ ಈ ಸಂಶೋಧಕನಿಗೆ ತನ್ನ ಜ್ಞಾನ ತೃಷೆಯನ್ನು ನೀಗಿಸಿಕೊಳ್ಳಲು ಅಧಿಕ ಸಂಖ್ಯೆಯ ಪುಸ್ತಕ, ಪತ್ರಿಕೆ ದಾಖಲೆಗಳು ಇದ್ದುದರಿಂದ ಅವುಗಳನ್ನು ಉತ್ಸಾಹದಿಂದ ಓದುತ್ತಾಹೋದರು. ಅದಕ್ಕೂ ಹೆಚ್ಚು ತೃಪ್ತಿನೀಡಿ ಒಂದು ಗ್ರಂಥಾಲಯದಲ್ಲಿ ಓದುವ ಅವಕಾಶವು ಅವರಿಗೆ ಮುಂದೆ ಲಭಿಸಿತು. ತಮ್ಮ ಸಂಶೋಧನೆಗಾಗಿ ಅಮೇರಿಕಕ್ಕೆ ಹೋದಾಗ ಹಾರ್ವರ್ಡ್ ್ ವಿಶ್ವವಿದ್ಯಾನಿಲಯದ ಕ್ಯಾಂಪಸ್ ನಲ್ಲಿ ಒಂದು ತಿಂಗಳು, ಓರಿಯಂಟೇಷನ್ ಕಾರ್ಯಕ್ರಮಕ್ಕೆಂದು ಹೋದಾಗ ಅಲ್ಲಿನ ಲೈಬ್ರರಿ ವಾರದಲ್ಲಿ ಏಳುದಿನ ದಿನದ 24 ಗಂಟೆಗಳ ಕಾಲ ತೆರೆದಿರುತ್ತಿತ್ತು. ಅಲ್ಲಿ ಹೋಗಿ ರಾತ್ರಿ ಬಹಳ ಹೊತ್ತಿನವರೆಗೆ ಓದುತ್ತಿದ್ದರು. ಅದಾದ ನಂತರ

ಅಂತಿಮವಾದ ಅತ್ಯಂತ ಸುಸಜ್ಜಿತವಾದ ವಾಷಿಂಗ್ ಟನ್‌ನಲ್ಲಿದ್ದ ಲೈಬ್ರರಿ ಆಫ್ ಕಾಂಗ್ರೇಸ್ ನಲ್ಲಿ ಆರು ತಿಂಗಳು ಅಧ್ಯಯನ ಮಾಡಿದರು. ಜಗತ್ತಿನ ಅತ್ಯಂತ ದೊಡ್ಡ ಲೈಬ್ರರಿಯೆಂದು ಪ್ರಖ್ಯಾತವಾದ ಈ ಗ್ರಂಥಾಲಯ ರಾತ್ರಿ 11 ಗಂಟೆಯವರೆಗು ತೆರೆದಿರುತ್ತಿತ್ತು. ಆದರೆ ಒಂದು ಸಣ್ಣಸಮಸ್ಯೆ ವಾಷಿಂಗ ಟನ್ನಿನಲ್ಲಿ ರೋಡ್ ಕೂಲ್ ಮೊದಲಾದ ಅಪರಾಧಗಳು ಹೆಚ್ಚಾಗಿವೆ. ರಾತ್ರಿ ಏಳು ಗಂಟೆಯ ಮೇಲೆ ಹೊರಗೆ ಹೋಗಬೇಡ ಎಂದು ಸ್ನೇಹಿತರು ಎಚ್ಚರಿಸಿದರು. ಯಾವುದು ಮುಖ್ಯ ಪುಸ್ತಕವೋ ಪ್ರಾಣವೋ ಶ್ರೀನಿವಾಸ್ ಅವರು 11 ಗಂಟೆವರೆಗು ಲೈಬ್ರರಿಯಲ್ಲಿದ್ದು ಮನೆಗೆ ಬರುತ್ತಿದ್ದರು. ಹೀಗೆ ರಾತ್ರಿ ಹಗಲು, ದಿನಬೆಳಿಗ್ಗೆ ಪುಸ್ತಕಗಳನ್ನು ಓದುತ್ತಿದ್ದುದು ಗ್ರಂಥಾಲಯಗಳಲ್ಲಿ ಬಹು ಮಟ್ಟಿಗೆ ನಿಜವೆಂದರೆ ವಿದ್ಯಾರ್ಥಿ ದೆಸೆಯಲ್ಲಿ ಪುಸ್ತಕಗಳನ್ನು ಕೊಳ್ಳಲು ಹಣ ತಂದೇ ಎಲ್ಲಿದ ಬಂದಿತು ಆದರೆ, ಅಧ್ಯಾಪಕರಾದ ಮೇಲೆ ಪುಸ್ತಕಗಳನ್ನು ಮನೆಗೆ ತರುವುದು ಅಗತ್ಯವಾಗಿತ್ತು. ಪುಸ್ತಕಗಳನ್ನು ತರಲು ಪ್ರಾರಂಭವಾದ ಮೇಲೆ ಪುಸ್ತಕಗಳ ರಾಶಿ ಎಷ್ಟಾಯಿತೆಂದರೆ, ಅವರ ತಾಯಿ ಪಾರ್ವತಮ್ಮ ನಿನ್ನ ಪುಸ್ತಕಗಳನ್ನು ಹೊರಗೆಸೆಯುತ್ತೇನೆ ಎಂದು ಎಚ್ಚರಿಕೆಕೊಟ್ಟರು ಹೊರಗೆಹೋದಾಗ ಸಭೆ ಸಮಾರಂಭಗಳಿಗೆ ಹೋದಾಗ ಪುಸ್ತಕ ಹೊತ್ತು ತರಲಾರಂಭಿಸಿದರು. ಅಮೇರಿಕದಿಂದ ಹಿಂದಿರುಗಿ ಬರುವಾಗ ಹಲವರಂತೆಯೇ ಪತ್ನಿಯರಿಗೆ ಬಟ್ಟೆ ಒಡವೆ, ತರದೆ ದೊಡ್ಡಪುಸ್ತಕ ಭಂಢಾರವನ್ನು ಹೊತ್ತುತಂದರು ಪುಸ್ತಕ ಪ್ರದರ್ಶನ, ವಿಶ್ವವಿದ್ಯಾನಿಲಯಗಳಿಗೆ ಹೋದಾಗ ಅಲ್ಲಿಂದ ಪುಸ್ತಕಗಳನ್ನು ಹೊತ್ತು ತಂದು ಮನೆಯ ಮೂಲೆ ಮೂಲೆಯಲ್ಲಿ ಪ್ರತಿ ಕೊಠಡಿಯಲ್ಲಿ ಗ್ಯಾರೆಜಿನಲ್ಲಿ ಪುಸ್ತಕಗಳನ್ನು ತುಂಬಿಡುತ್ತಾ ಬಂದಿದ್ದಾರೆ. ನಿವೃತ್ತರಾದ ಮೇಲೆ ಬರುವ ಪೆನ್ ಷನ್ ಮೊತ್ತ (ತಾಂತ್ರಿಕ ಕಾರಣಗಳಿಂದ ಅತ್ಯಲ್ಪವಾಗಿದ್ದರು ಪುಸ್ತಕಕೊಳ್ಳುವ ಉತ್ಸಾಹ ಕಡಿಮೆಯಾಗಿರಲಿಲ್ಲ. ಈ ಪುಸ್ತಕಗಳ ರಾಶಿಯನ್ನು ಕರಗಿಸುವ ಎರಡು ಘಟನೆಗಳನ್ನು ಇಲ್ಲಿ ಹೇಳಲೇಬೇಕು ಅನೇಕ ಸ್ನೇಹಿತರು ಮತ್ತು ಶಿಷ್ಯರು ಪ್ರಾಧ್ಯಾಪಕರಿಂದ ಓದುವುದಕ್ಕೆಂದು ತೆಗೆದುಕೊಂಡುಹೋದವರು ಹಿಂದಿರುಗಿಸಿಲ್ಲ. ಇನ್ನೊಂದು ದುರಂತ ಸಂಗತಿಯೆಂದರೆ ಮೈಸೂರಿನ ವಿಶ್ವವಿದ್ಯಾನಿಲಯ ಅಧ್ಯಾಪಕರ ನಿವಾಸದಲ್ಲಿ ಗೆದ್ದಲುಹುಳು, ಸುಮಾರು ಒಂದು ಲಾರಿಯಷ್ಟು ಪುಸ್ತಕಗಳನ್ನು ತಿಂದು ಹಾಕಿದವು. ಇದರಿಂದ ಲಕ್ಷಾಂತರ ರೂಪಾಯಿ ನಷ್ಟವಾಯಿತು. ಆದರೂ ಪುಸ್ತಕಗಳ ರಾಶಿ ಕಡಿಮೆಯಾಗಲಿಲ್ಲ ದಿನದಿನಕ್ಕೂ ಇನ್ನೂ ಹೆಚ್ಚುತ್ತಿದೆ.

**ಸಮಾಜಸೇವೆ:**

ಎಂ.ವಿ. ಶ್ರೀನಿವಾಸ್ ಅವರ ವ್ಯಕ್ತಿತ್ವದ ಮತ್ತೊಂದು ಮುಖ ಅವರ ಸಮಾಜ ಸೇವೆ ಬಾಲ್ಯದಿಂದ ಇಂದಿನವರೆಗೂ ಅವರು ಅವರು ಒಂದಿಲ್ಲೊಂದು ರೀತಿ ಸಮಾಜಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹೈಸ್ಕೂಲ ವಿದ್ಯಾರ್ಥಿಯಾಗಿದ್ದಾಗಲೇ ತಮ್ಮ ಹಳ್ಳಿಯಲ್ಲಿ ಒಂದು ಯುವಕ ಸಂಘವನ್ನು ಸ್ಥಾಪಿಸಿ ಅದರ ಮೂಲಕ ಗ್ರಾಮಜೀವನದಲ್ಲಿ ಪುನಶ್ಚೇತನಯವನ್ನುಂಟುಮಾಡಲು ಶ್ರಮಿಸಿದರು. ಅಷ್ಟೆ ಅಭಿವೃದ್ಧಿಯಿಲ್ಲದ ಒಂದು ಸಾಧಾರಣ ಗ್ರಾಮ. ಗ್ರಾಮದ ಜನರು ಆರ್ಥಿಕವಾಗಿ, ಸಾಮಾಜಿಕವಾಗಿ, ಹಿಂದುಳಿದವರು, ಹಿರೇಹಳ್ಳಿ ಹಾಗೂ ಪಕ್ಕದ 3–4 ಹಳ್ಳಿಗಳಲ್ಲಿ ಸಾಮಾಜಿಕ, ಶೃಕ್ಷಣಿಕ ಕಾರ್ಯಕ್ರಮಗಳಿಂದ ಅವರಲ್ಲಿ ಸೇವಾಮನೋಭಾವವನ್ನುಂಟು ಮಾಡುವುದೇ ಅವರಗುರಿ. ಆದರೆ ನಮ್ಮ ಹಳ್ಳಿಗಳಲ್ಲಿ ಅಜ್ಞಾನ ಮೂಢನಂಬಿಕೆ ಇವೇ ಮುಂತಾದ ತಡೆಗೋಡೆಗಳು ಗ್ರಾಮೋದ್ಧಾರ ಕೆಲಸಕ್ಕೆ ಅಡ್ಡಿಯಾಗಿದ್ದವು ಹಳ್ಳಿಯಲ್ಲಿ ಒಂದು ಹಸ್ತ ಪತ್ರಿಕೆಯನ್ನು

ಕೂಡ ಹೊರತಂದರು. ಅವರು ಮೈಸೂರಿಗೆ ಹೋರಟುಹೋದ ಮೇಲೆ ಅವರ ತಮ್ಮ ಎಂ.ವಿ. ರಾಮಚಂದ್ರ ಈ ಕೆಲಸವನ್ನು ಬಹಳ ಯಶಸ್ವಿಯಾಗಿ ನಡೆಸಿಕೊಂಡು ಹೋದರು.[30]

ಮೈಸೂರು ಮಹಾರಾಜ ಕಾಲೇಜಿನಲ್ಲಿ ಬಹು ಭಾರದ ಪುಸ್ತಕಗಳನ್ನು ಓದುತ್ತಿರುವಾಗಲೂ ಸಮಾಜ ಸೇವೆಗೆ ಅವಕಾಶವನ್ನು ಮಾಡಿಕೊಂಡಿದ್ದರು. ಕಾಲೇಜಿನಲ್ಲಿದ್ದ ಸಮಾಜ ಸೇವಕ ಸಂಘ ಪ್ರೊ.ಯಮುನಾಚಾರ್ ಅವರ ನೇತ್ರತ್ವದಲ್ಲಿ ಒಳ್ಳೆಯ ಕೆಲಸವನ್ನು ಮಾಡುತ್ತಿತ್ತು. ಶ್ರೀನಿವಾಸ ಅವರು ಅದರ ಸದಸ್ಯರಾಗಿ ನಗರದ ವಿವಿದೆಡೆ ಸೇವಾಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು. ನಗರ ಸ್ವಚ್ಚತಾಕಾರ್ಯದಲ್ಲಿ ಕುಕ್ಕರಹಳ್ಳಿಯ ರಸ್ತೆ ಚರಂಡಿಯನ್ನು ಕಸತೆಗೆದು ಸ್ವಚ್ಚಗೊಳಿಸಿದರು. ಹಾಗಾಗಿ ಮೈಸೂರಿನ ರಾಮಕೃಷ್ಣ ಆಶ್ರಮಕ್ಕೆ ಹೋಗಿ ಅಲ್ಲಿ ಲೈಬ್ರರಿಯ ಸ್ವಯಂಸೇವಕರಾಗಿ ಸೇವೆ ಮಾಡಿದ್ದರು. ಆದರೆ ಮೈಸೂರಿನ ಫ್ಯಾಮಿಲಿ ಪ್ಲಾನಿಂಗ್ ಅಸೋಶಿಯೇಷನ್ ಸದಸ್ಯರಾಗಿ ಅವರು ಇಪ್ಪತ್ತು ವರ್ಷ ಕಾಲ ಉಪಯುಕ್ತ ಸೇವೆಸಲ್ಲಿಸಿದರು ಅದರಲ್ಲಿ ಹದಿಹರೆಯದವರ ಮಾರ್ಗದಶನ ವಿಭಾಗಕ್ಕೆ ಸಂಚಾಲಕರಾಗಿ ಅವರು ವಿವಿಧ ಕಾಲೇಜಿನ ವಿದ್ಯಾರ್ಥಿಗಳಿಗೆ ನೈತಿಕ ಶೈಕ್ಷಣಿಕ ಮಾರ್ಗದರ್ಶನ ನೀಡಿದ್ದು ಅವರ ಬಹು ಮುಖ್ಯ ಸಾಧನೆ ಮೈಸೂರಿನಲ್ಲಿ ಅವರು ರೂಢಿ ಕಾರ್ಯ ಪ್ರಕೃತಿ ಚಿಕಿತ್ಸೆ ಸೇವಾ ಶಿಬಿರಗಳು ತಮ್ಮ ಸ್ನೇಹಿತ ಕೆ.ವಿ. ನಾರಾಯಣ ಅವರ ನೆರವಿನಿಂದ ಆರು ಶಿಭಿರಗಳನ್ನು ಏರ್ಪಡಿಸಿ ಪ್ರಕೃತಿ ಚಿಕಿತ್ಸೆಯನ್ನು ಅನೇಕರಿಗೆ ಪರಿಚಯಮಾಡಿಸಿಕೊಟ್ಟರು. ಅದೇರೀತಿ ಸುಮಾರು ಆರು ಕಡೆ ತಜ್ಞರಿಂದ ಧ್ಯಾನ ಶಿಬಿರ ಏರ್ಪಡಿಸಿದ್ದರು. ತಮ್ಮ ಕೆಲವು ಮಿತ್ರರಿಂದ ಸಹಾಯಧನ ಪಡೆದು. ಬಡ ವಿದ್ಯಾರ್ಥಿನಿಯರಿಗೆ ವಿದ್ಯಾರ್ಥಿವೇತನವನ್ನಾಗಿ ಹತ್ತು ವರ್ಷ ಕಾಲ ನೀಡುತ್ತ ಬಂದಿದ್ದರು. ಮೈಸೂರಿನ ಬೋಗಾದಿ ಬಡಾವಣೆ ಎರಡನೇ ಹಂತದಲ್ಲಿದ್ದ ದಾರಿ ದೀಪ ಸಂಸ್ಥೆಯ ಸದಸ್ಯರಾಗಿ ಹಲವುರೀತಿಯ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು, ವಿಶ್ವವಿದ್ಯಾನಿಲಯದ ವಿದ್ಯಾರ್ಥಿನಿಲಯದಲ್ಲಿ ವಾರ್ಡನ್ ಆಗಿ ಕೆಲವು ವರ್ಷಕೆಲಸ ಮಾಡಿದರು. ಸ್ಕೌಟ್ ಸಂಸ್ಥೆಯ ಅಧಿಕಾರಿಯಾಗಿ ವಿದ್ಯಾರ್ಥಿಗಳಿಗೆ ಹಲವಾರು ವಿದ್ಯೆ ಮತ್ತು ಕಲೆಗಳನ್ನು ಕಲಿಸಿಕೊಟ್ಟರು.



ಚಿತ್ರದುರ್ಗ ಕಾಲೇಜಿನಲ್ಲಿ ವಿದ್ಯಾಥಿಗಳೊಂದಿಗೆ ಬೆಳಗಿನ ಜಾವ ಉರಿನ ಬೀದಿಗಳನ್ನು ಗುಡಿಸುವುದು ಮೊದಲಾದ ಸೇವಾಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದರು. ಚಿತ್ರದುರ್ಗದ ಸರ್ಕಾರಿ ಆಸ್ಪತ್ರಯಲ್ಲಿ ಇವರು ಒಂದು ಸೇವಾ ಸಂಸ್ಥೆ ಸ್ಥಾಪಿಸಿ ಆಸ್ಪತ್ರೆಯಲ್ಲಿ ಔಷಧಿ ಸಿಂಪಡಿಸಿ ಶುದ್ಧಿಕರಿಸಿ ತಿಗಣೆ ನಿವಾರಣ ಔಷಧಿ ಪ್ರಯೋಗಿಸಿ ಸಾವಿರಾರು ರೋಗಿಗಳ ಕೃತಜ್ಞತೆಗೆ ಪಾತ್ರರಾಗಿದ್ದರು. ಬೆಂಗಳೂರಿನಲ್ಲಿ ನಿವಾಸಿ ಕ್ಷೇಮಾಭಿವೃದ್ಧಿ ಸಂಘದ ಕಾರ್ಯದರ್ಶಿಯಾಗಿ ಸ್ವಚ್ಚತಾಕಾರ್ಯ ನೀರು ಸರಬರಾಜು ಮೊದಲಾದ ಸಮಸ್ಯೆಗಳನ್ನು ಬಗೆಹರಿಸಲು ಶ್ರಮಿಸುತ್ತಿದ್ದರು.[31]

**ಶೋಧನೆ –ಸಾಧನೆ.**

ಶ್ರೀನಿವಾಸ ಅವರ ಸಂಶೋಧನಾ ವೈಖರಿ ಮತ್ತು ಸಾಧನೆ ಆಶ್ಚರ್ಯಕರವಾಗಿರುವಂತೆ ಅನುಕರಣೀಯವಾದುದು ಆಗಿದೆ. ಅವರು ತಮ್ಮ ಎಂ.ಎ ಪದವಿ ಪರೀಕ್ಷೆ ಪೂರೈಸುತ್ತಿದ್ದಂತೆ ಸಂಶೋಧನ ಕಾರ್ಯವನ್ನು ಕೈಗೆತ್ತಿಕೊಂಡರು. ಮರಾಠ ಇತಿಹಾಸದ ಬಗ್ಗೆ ಮಾಹಿತಿ ಸಂಗ್ರಹಿಸಿ ಪುಣೆಯ ಭಾರತಿಯ ಇತಿಹಾಸ ಸಂಶೋಧನ ಮಂಡಳಿಗೆ ಬೇಟಿ ನೀಡಿ ಅಲ್ಲಿ ಮೂರು ತಿಂಗಳಿದ್ದು

ಮರಾಠಿ ಭಾಷೆಯ ಮೂಲದಾಖಲೆಗಳನ್ನು, ಗ್ರಂಥಗಳನ್ನು ಅಧ್ಯಯನ ಮಾಡಿದ್ದಲ್ಲದೆ ಮಹಾರಷ್ಟ್ರದ ಪ್ರದೇಶಗಳಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿ ಸಂಗ್ರಹಿಸಿದರು. ಯಾವ ವಿಷಯವನ್ನು ಅಧ್ಯಯನ ಮಾಡಬೇಕಾದರೂ ಮೂಲಗಳನ್ನು ಹುಡುಕಿ ಸಂಪೂರ್ಣ ಸಮಗ್ರ ಮಾಹಿತಿ ಪಡೆಯುವ ಜಾಯಮಾನ ಅವರದು. ದೆಹಲಿಯ ಜವಹಾರ್ ಲಾಲ್ ನೆಹರೂ ವಿಶ್ವವಿದ್ಯಾನಿಲಯದಲ್ಲಿ ಸುಪ್ರಸಿದ್ಧ ಏಷ್ಯದ ಅತ್ಯಂತ ದೊಡ್ಡ ಗ್ರಂಥಾಲಯದಲ್ಲಿ ಅಧ್ಯಯನಮಾಡಿದ ಮೇಲೆ ರಾಷ್ಟ್ರೀಯ ಪತ್ರಾಗಾರದಲ್ಲಿ ನಾಲ್ಕು ವರ್ಷ ಹಾಗೆಯೇ ತೀನ್ ಮುರ್ತಿ ಹೌಸ್ ನ ನೆಹರು ಮ್ಯೂಸಿಯಂ ಗ್ರಂಥಾಲಯದಲ್ಲಿ ಒಂದು ವರ್ಷ ಅಧ್ಯಯನ ನಡೆಸಿದರು. ಮುಂದೆ ಅಮೇರಿಕಕ್ಕೆ ಹೋದಾಗ ಅಲ್ಲಿ ನ್ಯೂಯಾರ್ಕ್ ್ ಸ್ಟೇಟ್ ಲೈಬ್ರರಿ ಕೋಲಂಬಿಯಾ, ಫಿಲಡೆಲ್ಫಿಯಾ, ನಾರ್ಥ ಕೆರೋಲಿನ್ ಮೊದಲಾದ ವಿಶ್ವವಿದ್ಯಾನಿಲಯಗಳ ಗ್ರಂಥಾಲಯಗಳಲ್ಲಿ ಅಧ್ಯಯನ ಮಾಡಿದರು. ವಾಷಿಂಗ್ ಟನ್ನಿನಲ್ಲಿರುವ ನ್ಯಾಷನಲ್ ಆರ್ಕ್‌ವ್ಸ್ ರೂಸ್ ವೇಲ್ಟ್ ಲೈಬ್ರರಿ ಮೊದಲಾದುವುಗಳಿಗೆ ಭೇಟಿ ನೀಡಿ ಮಾಹಿತಿ ಸಂಗ್ರಹಿಸಿದರು.

ಅಮೇರಿಕಾದ ಪ್ರಸಿದ್ಧ ವಿಶ್ವವಿದ್ಯಾನಿಲಯಗಳಿಗೆ ಭೇಟಿ ನೀಡಿ ಅನೇಕ ಪ್ರಾಧ್ಯಾಪಕರನ್ನು ಸರ್ಕಾರಿ ಅಧಿಕಾರಿಗಳನ್ನು ಸಂಶೋಧಕರನ್ನು ಸಂದರ್ಶಿಸಿ ವಿಷಯ ಸಂಗ್ರಹಿಸಿಕೊಂಡರು ಅನಂತರ ಲಂಡನ್ನಿನಲ್ಲಿರುವ ಪ್ರಸಿದ್ಧ ಬ್ರಿಟೀಷ್ ಮ್ಯೂಸಿಯಂ ಗ್ರಂಥಾಲಯ ಹಾಗೂ ಇಂಡಿಯ ಆಫೀಸ್ ಲೈಬ್ರರಿಗಳಲ್ಲಿರುವ ಅಮೂಲ್ಯ ಪುಸ್ತಕ ದಾಖಲೆಗಳನ್ನು 3 ತಿಂಗಳಕಾಲ ಅಧ್ಯಯನ ಮಾಡಿ ಬಂದರು ಮತ್ತು ಈಜಿಪ್ಟಗೂ ಭೇಟಿ ನೀಡಿ ಅಲ್ಲಿನ ಕೆಲವು ವಿಶ್ವವಿದ್ಯಾನಿಲಯಗಳಿಗೆ ಭೇಟಿ ನೀಡಿದ್ದರು.

ಮೈಸೂರು ವಿಶ್ವವಿದ್ಯಾನಿಲಯದ ಹಲವು ಸಂಶೋಧನೆಯ ಪ್ರಾಜೆಕ್ಟ್ ತೆಗೆದು ಕೊಂಡು ಮದರಾಸಿನ ಪತ್ರಾಗಾರ ಆಂಧ್ರ ಮತ್ತು ಮಹಾರಾಷ್ಟ್ರದ ಪತ್ರಾಗಾರಗಳಲ್ಲಿ ಒಂದೊಂದು ವರ್ಷಗಳ ಕಾಲ ದಾಖಲೆ ನೋಡಿ ಬಂದಿದರು. ಮಡಿಕೇರಿಯಲ್ಲಿದ್ದ ರೆಸಿಡೆನ್ಸಿ ರಿಕಾರ್ಡ್‌ಗಳನ್ನು ಒಂದು ವರ್ಷಕ್ಕೂ ಹೆಚ್ಚು ಅಧ್ಯಯನ ಮಾಡಿದ್ದಾರೆ. ಹೈದರಾಬಾದಿನಲ್ಲಿರುವ ಅಮೇರಿಕ ಸೆಂಟರ್ ಮತ್ತು ಉಸ್ಮಾನಿಯ ವಿಶ್ವವಿದ್ಯಾನಿಲಯದ ಗ್ರಂಥಾಲಯಗಳಲ್ಲೂ ಬಹಳದಿನ ಅಧ್ಯಯನ ಮಾಡಿದ್ದಾರೆ. ಇನ್ನು ಬೆಂಗಳೂರಿನಲ್ಲಿ ರಾಜ್ಯಪತ್ರಾಗಾರಕ್ಕೆ ಕ್ಷೇತ್ರಕಾರ್ಯಸಂಶೋಧಕರಾಗಿ ಹೀಗೆ ಒಂದುರೀತಿಯಲ್ಲಿ ಅವರ ಬಹುಮಟ್ಟಿನ ಜೀವನವನ್ನು ಗ್ರಂಥಾಲಯ ಪತ್ರಾಗಾರಕಾರ್ಯ ಸಂದರ್ಶನಗಳಲ್ಲೇ ಕಳೆದಿದ್ದಾರೆ ಎನ್ನಬಹುದು.

**ವಿಚಾರ ಗೋಷ್ಠಿ.**

ಎಂ.ವಿ. ಶ್ರೀನಿವಾಸ್ ಅವರು ಸಾಕಷ್ಟು ಇತಿಹಾಸದ ಅಭಿಮಾನಿಗಳಿಗೆ ಆಸಕ್ತರಿಗೆ ಪ್ರಿಯವಾಗಿರುವುದು ಅವರು ಸಭೆ ಸಮಾರಂಭ ವಿಚಾರಗೋಷ್ಠಿಗಳಲ್ಲಿ ವಹಿಸುವ ಪಾತ್ರದಿಂದ ತಮ್ಮ ಅಧ್ಯಯನ ಸಂಶೋಧನೆಯಿಂದ ಕಲಿತಿದ್ದನ್ನು ತಮ್ಮ ಸಂಶೋಧನಾ ಪ್ರಬಂಧಗಳಲ್ಲಿ ಗೋಷ್ಠಿಗಳಲ್ಲಿ ಸಮ್ಮೇಳನಗಳಲ್ಲಿ ಮಂಡಿಸುತ್ತಿದ್ದಾರೆ. ಬರಿಯ ಪ್ರಭಂದ ಮಂಡನೆ ಮಾತ್ರವಲ್ಲ ಅವುಗಳಲ್ಲಿನ ಚರ್ಚೆಯಲ್ಲಿ ಭಾಗವಹಿಸಿ ತಮ್ಮ ಅಭಿಪ್ರಾಯ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಿದ್ದರು, ಅವರ ಚೆನ್ನೈ ಮತ್ತು ಆಂದ್ರದ ಸ್ನೇಹಿತರು ಪ್ರಾಧ್ಯಾಪಕರು, ಅವರ ವ್ಯಾಖ್ಯಾನ ಟೀಕೆ ಮಾಡುತ್ತಿದ್ದುದಕ್ಕಾಗಿ ಅವರನ್ನು ತಮ್ಮ ಸಭೆಗೋಷ್ಠಿಗೆ ಶೋಭೆತರುತ್ತಿದ್ದರು. ಹೀಗೆ ಶ್ರೀನಿವಾಸ್ ರಾಜ್ಯಮಟ್ಟದಿಂದ ರಾಷ್ಟ್ರಮಟ್ಟದ ಅಂತರ ರಾಷ್ಟ್ರೀಯ ಸಮ್ಮೇಳನ ವಿಚಾರ ಗೋಷ್ಠಿಗಳಲ್ಲಿ ಪ್ರಬಂಧಗಳನ್ನು ಮಂಡಿಸುತ್ತ ಹೆಚ್ಚು ವಿದ್ವಾಂಸರಿಗೆ, ವಿದ್ಯಾರ್ಥಿಗಳಿಗೆ ಬೇಕಾದವರೆನಿಸಿಕೊಂಡಿದ್ದರು, ಅನೇಕ ವೇಳೆ ಈ ಸಭೆ

ಸಮ್ಮೇಳನಗಳಿಗೆ ಹೋಗಲು ಬಹಳ ಹಣವೆಚ್ಚವಾಗುತ್ತಿತ್ತು ಪ್ರಯಾಣ, ಹೊರಗೆ ಊಟ, ವಸತಿವ್ಯವಸ್ಥೆ ಅಷ್ಟು ಅನುಕೂಲವಾಗಿರುತ್ತಿರಲಿಲ್ಲ. ತಾವು ನಿವೃತರಾದ ಮೇಲೆ ಅವರು ಬೇರೆ ಪ್ರಾಧ್ಯಾಪಕರು ಬಾರದಿದ್ದರೂ ತಾವೆ ಬಂದು ಭಾಗವಹಿಸಿ ಪ್ರಬಂಧ ಮಂಡಿಸುತ್ತಿದ್ದರು. ತಮ್ಮ ಸಂಶೋಧನೆ ಬಡ್ತಿ ಆರ್ಥಿಕ ಲಾಭ ಮೊದಲಾದ ಪ್ರಯೋಜನಕ್ಕಾಗಿ ಅಲ್ಲ ಆತ್ಮತೃಪ್ತಿಗಾಗಿ ಮಾಡುತ್ತಿರುವುದಾಗಿ ಹೇಳುತ್ತಿದ್ದರು.

**ಸಂದರ್ಶನ**

1. ಬಿ.ಎನ್. ನಾಯ್ಡು
2. ಬಿ.ಎನ್ ನಾಯ್ಡು
3. ಸುಧಾ ಎನ್ ರಾವ್
4. ಡಾ. ಬಿ.ಎಸ್. ಪುಟ್ಟಸ್ವಾಮಿ
5. ಎಸ್. ಹರ್ಷ
6. ಎಂ. ವಿ. ಶ್ರೀನಿವಾಸ್
7. ಎಂ. ವಿ. ಶ್ರೀನಿವಾಸ್
8. ಬಿ.ಎನ್. ನಾಯ್ಡು
9. ಕೆ.ಎಸ್. ರಾಜಣ್ಣ
10. ಬಿ.ಎನ್. ನಾಯ್ಡು
11. ಡಿ. ಚಂದ್ರಪ್ಪ
12. ಎನ್. ನಂದೀಶ್ವರ
13. ಎನ್. ನಂದೀಶ್ವರ
14. ವೆಂಕಣ್ಣಚಾರ್ (ಎಂ.ವಿ. ಶ್ರೀನಿವಾಸ್ ಜನತಾ ವಾಣಿ ಫೆ. 13–1977)
15. ವೆಂಕಣ್ಣಚಾರ್
16. ವೆಂಕಣ್ಣಚಾರ್
17. ತಿರುಮಲೈ ಶ್ರೀ ರಂಗಚಾರ್ಯ
18. ಎಂ.ವಿ. ಶ್ರೀನಿವಾಸ್ ಸಂ ಮಲ್ಲಾರ (2001–2006)
19. ಬಿ.ಎನ್. ನಾಯ್ಡು
20. ಬಿ. ಚಂದ್ರಪ್ಪ
21. ಎಂ.ವಿ. ಶ್ರೀನಿವಾಸ್
22. ಎಚ್.ಆರ್. ದಾಸೇಗೌಡ
23. ಕೆ.ಎಸ್. ರಾಜಣ್ಣ
24. ಎಚ್.ಆರ್. ದಾಸೇಗೌಡ
25. ಎಂ.ವಿ. ಶ್ರೀನಿವಾಸ್
26. ಎಂ.ವಿ. ಶ್ರೀನಿವಾಸ್
27. ಶ್ರೀಮತಿ ಸರೋಜಮ್ಮ
28. ಶ್ರೀಮತಿ ಸರೋಜಮ್ಮ
29. ಎನ್. ನಂದೀಶ್ವರ
30. ಎಂ.ಸಿ. ನಂಜುಂಡಯ್ಯ
31. ಬಿ.ಎಸ್. ಪುಟ್ಟಸ್ವಾಮಿ

# ಅಧ್ಯಾಯ –6

**ಉಪಸಂಹಾರ:**

ನಮ್ಮ ನಾಡಿನ ಹೆಸರಾಂತ ಹಿರಿಯ ವಿದ್ವಾಂಸ ಎಂ.ವಿ. ಶ್ರೀನಿವಾಸರವರ ಜೀವನ ಮತ್ತು ಸಾಧನೆ ಒಂದು ಕುತುಹಲಕಾರಿಯಾದ ಹಾಗೂ ಬೋಧ ಪ್ರಧವಾದ ಕಥೆಯಾಗಿದೆ. ಸಾಮಾನ್ಯ ಕುಟುಂಬದಲ್ಲಿ ಜನಿಸಿ ಹಲವಾರು ಕಷ್ಟ ನಷ್ಟಗಳನ್ನು ಅನುಭವಿಸಿ ಶ್ರೇಷ್ಠಮಟ್ಟದ ಶೈಕ್ಷಣಿಕ ಸಾಧನೆ ಮಾಡಿ ಅವರೊಬ್ಬ ಶ್ರೇಷ್ಠ ಸಾಧಕರಾಗಿ ನಿಲ್ಲುತ್ತಾರೆ. ಅವರ ವ್ಯಕ್ತಿತ್ವವನ್ನು ಸಾಧನೆಗಳನ್ನು ಚಿಂತನೆಗಳನ್ನು ಅಧ್ಯಯನ ಮಾಡುವುದರಿಂದ ಒಬ್ಬ ಯುಶಸ್ವಿ ಪ್ರಾಧ್ಯಾಪಕನ ಗೆಲುವಿನ ವಿಧಾನವನ್ನು ತಿಳಿದುಕೊಳ್ಳುಬಹುದಾಗಿದೆ. ಶ್ರೀನಿವಾಸರವರು ತುಮಕೂರಿನ ಹಿರೇಹಳ್ಳ ಗ್ರಾಮದಲ್ಲಿ ನೆಲಸಿ ಸಾಕಷ್ಟು ಅನುಕೂಲಗಳಿಲ್ಲದಿದ್ದರೂ ಸ್ವಂತ ಪರಿಶ್ರಮದಿಂದ ಶಿಕ್ಷಣದಲ್ಲಿ ಹಂತ ಹಂತವಾಗಿ ಮೇಲೆ ಬಂದು ಅಧ್ಯಾಪಕ ವೃತ್ತಿಯನ್ನು ಅವಲಂಭಿಸಿದರು. ಅನಂತರ ಪಿ.ಎಚ್.ಡಿ ಗಳಿಸಲು ಅವರು ದೆಹಲಿಯ ಜವಹರಲಾಲ್ ನೆಹರು ವಿಶ್ವವಿದ್ಯಾನಿಲಯ ಮತ್ತು ಕೊಲಂಬಿಯ ವಿಶ್ವವಿದ್ಯಾನಿಲಯ ಮುಂತಾದ ಕಡೆ ಉನ್ನತ ವ್ಯಾಸಂಗ ಮಾಡಿ ತಮ್ಮ ಸಂಶೋಧನೆಯ ಭಾಗವಾಗಿ ಪಿ.ಎಚ್.ಡಿ ಪ್ರಬಂಧವನ್ನು ಬರೆದು ಡಾಕ್ಟ್ರೇಟ್ ಪದವಿಯನ್ನು ತಮ್ಮದಾಗಿಸಿಕೊಂಡರು.

ಇವರ ವೈಯುಕ್ತಿಕ ಹಾಗೂ ಶೈಕ್ಷಣಿಕ ಜೀವನದಲ್ಲಿ ಅನೇಕ ತೊಂದರೆಗಳನ್ನು ಎದುರಿಸಬೇಕಾಯಿತು. ಇತ್ತೀಚೆಗೆ ಒಬ್ಬ ವಿದೇಶಿ ವಿದ್ವಾಂಸರು ಭಾರತದಲ್ಲಿ ಉತ್ಸಾಹಿ ತರುಣರಿಗೆ ಅವಕಾಶಗಳು ಅನುಕೂಲಗಳು ಬಹಳ ಕಡಿಮೆ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಅಡೆತಡೆಗಳಿಂದ ಅದೆಷ್ಟೋ ಪ್ರತಿಭಾವಂತ ವಿದ್ಯಾವಂತರು ಅವಕಾಶಗಳಿಂದ ವಂಚಿತರಾಗುತ್ತಾರೆ. ಇದು ವ್ಯಕ್ತಿಗೆ ಹಾನಿಕರವಾಗಿರುವಂತೆ ದೇಶಕ್ಕೂ ಕೂಡ ಮಾರಕವಾದುದು.

ಯಾವುದೇ ರೀತಿಯ ಕೌಟುಂಬಿಕ ಬೆಂಬಲವಿಲ್ಲದೆ ಹಣಕಾಸಿನ ಅನುಕೂಲವಿಲ್ಲದೆ ಅವರು ಸ್ವಪ್ರಯತ್ನದಿಂದ ಎಲ್ಲ ಕಷ್ಟಗಳನ್ನು ಗೆದ್ದಿಕೊಂಡು ಶೈಕ್ಷಣಿಕ ಕ್ಷೇತ್ರದಲ್ಲಿ ಅತ್ಯುನ್ನತ ಮಟ್ಟವನ್ನು ಮುಟ್ಟಿದವರು. ಇಂತಹ ಯಶಸ್ವಿ ಲೇಖಕ ಬೊಧಕ, ಚಿಂತಕರ ಜೀವನ ಮತ್ತು ಸಾಧನೆಯನ್ನು ಕುರಿತು. ಅಧ್ಯಯನ ನಡೆಸುವುದು ಪ್ರಸ್ತುತವಾಗಿದೆ. ಎಂದು ಹೇಳಬಹುದು.

ನಮ್ಮ ನಾಡಿನ ಸಾಮಾಜಿಕ, ಶೈಕ್ಷಣಿಕ ಪರಿಸ್ಥಿತಿಯನ್ನು ಗಮನಿಸಿದಾಗ ಪ್ರತಿಭಾವಂತರಿಗೆ ಸೂಕ್ತ ಪ್ರೊತ್ಸಾಹ ಬೆಂಬಲವಿಲ್ಲದಿರುವುದು ಕಂಡುಬರುತ್ತದೆ ಅದೇಷ್ಟೋ ಉತ್ಸಾಹಿ ತರುಣರು ಶಿಕ್ಷಣದಲ್ಲಾಗಲಿ, ಮತ್ತೀತರ ಕ್ಷೇತ್ರಗಳಲ್ಲಿ ಮುಂದುವರಿದು ಮೇಲಕ್ಕೆ ಬರಲು ಸಾಧ್ಯವಾಗದೆ ನಿರಾಶರಾಗಿ ಸಮಾಜದಲ್ಲಿ ವಿಧವಿಧವಾದ ನಿರಾಸೆ ನಿರ್ಲಕ್ಷಕ್ಕೆ ಕಾರಣವಾಗಿದೆ. ಸರ್ಕಾರದ ನೀತಿ ನಿಯಮಗಳು ಒಂದು ಕಡೆ ಪ್ರತಿಭಾ ಪುರಸ್ಕಾರಕ್ಕೆ ಗಮನ ನೀಡದೆ ಹೋಗಿರುವಂತೆ ಸಾಮಾಜಿಕ ರಂಗದಲ್ಲೂ ಇಂತಹ ಕೊರತೆಗಳನ್ನು ಲೋಪದೋಷಗಳನ್ನು ಸರಿಪಡಿಸುವ ಪ್ರಯತ್ನವನು ಕಾರ್ಯಗತಗೊಳ್ಳಬೇಕಾಗಿದೆ.

ಇಂತಹ ಕಷ್ಟಗಳ ಸರಮಾಲೆಯನ್ನು ಎದುರಿಸಿ ತೊಂದರೆಗಳ ಮಧ್ಯದಲ್ಲಿ ವಿದ್ಯಾಭ್ಯಾಸದಲ್ಲಿ ಶ್ರೇಷ್ಠ ಸಾಧನೆ ಮಾಡಿದ ಮೇಲೂ ಅದನ್ನು ಸಹ ಗುರುತಿಸುವಷ್ಟು ಮೆಚ್ಚಿ ಪ್ರೋತ್ಸಾಹಿಸುವಷ್ಟು ಸಹಾನುಭೂತಿ ಹೃದಯವಂತಿಕೆ ನಮ್ಮಲ್ಲಿ ಇಲ್ಲದಂತಾಗಿದೆ. ನಮ್ಮ ಸಮಾಜದ ಸರ್ಕಾರದ ರೀತಿ

ನೀತಿಗಳು ಅಸಾಧಾರಣವಾದ ಪ್ರತಿಭಾಶಾಲಿಗಳನ್ನು ಸಮರ್ಥರನ್ನು ಗುರುತಿಸಿ ಅವರಿಗೆ ಎಲ್ಲಾ ವಿಧವಾದ ಅನುಕೂಲಗಳನ್ನು ಕಲ್ಪಿಸಿಕೊಟ್ಟಿದೆ ಆದರೆ ನಮ್ಮ ನಾಡಿನ ಶೈಕ್ಷಣಿಕ ಮಟ್ಟ ಮತ್ತಷ್ಟು ಹೆಚ್ಚಿ ನಾವು ವಿದೇಶಗಳಲ್ಲಿರುವ ಗುಣಮಟ್ಟವನ್ನು ಮುಟ್ಟುವುದು ಸಾದ್ಯವಾಗಬಹುದು. ಪ್ರತಿಭೆ ಮತ್ತು ಸಾಮರ್ಥವನ್ನು ಗಣನೆಗೆ ತೆಗೆದುಕೊಳ್ಳುವ ಸಮಯ ನಮ್ಮಲ್ಲಿ ಯಾವಾಗ ಬರುತ್ತದೆ. ಎಂದೂ ಹೇಳು ಸಾಧ್ಯವಿಲ್ಲ. ಈ ಸಂಪ್ರಬಂಧದಲ್ಲಿ ಪ್ರೊ.ಎಂ.ವಿ. ಶ್ರೀನಿವಾಸರವರ ಬಾಳಿನ ಹೆಗ್ಗುರುತುಗಳನ್ನು ಅಧ್ಯಾಯ ಮಾಡಿದಂತೆ ಅವರ ಶೈಕ್ಷಣಿಕ ಸಾಧನೆಗಳನ್ನು ಪರಿಶೀಲಿಸಲಾಗಿದೆ. ಶಿಕ್ಷಣ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ಅವರು ಅತ್ಯುತ್ತಮವಾದ ಕಾರ್ಯಸಾಧನೆಯನ್ನು ಮಾಡಿರುವುದನ್ನು ಇಲ್ಲಿ ಚರ್ಚಿಸಲಾಗಿದೆ. ಪ್ರೊ.ಶ್ರೀನಿವಾಸರವರ ಶೈಕ್ಷಣಿಕ ಕ್ಷೇತ್ರದ ಮಹಾನ್ ಸಾಧನೆಎಂದರೆ ಅವರು ದೆಹಲಿಯ ಪ್ರತಿಷ್ಠಿತ ಜವಹರ್ ಲಾಲ ನೆಹರು ವಿಶ್ವವಿದ್ಯಾಲಯದಲ್ಲಿ ಸಂಶೋಧನೆ ಕೈಗೊಂಡು. ಅನೇಕ ವಿಷಯಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡು ಅನಂತರ ಅಮೇರಿಕದ ಕೊಲಂಬಿಯಾ ವಿಶ್ವವಿದ್ಯಾನಿಲಯದಲ್ಲಿ ಸಂಶೋಧನೆಯನ್ನು ಕೈಗೊಂಡು ಅದರಲ್ಲಿ ಯಶಸ್ವಿಯಾಗಿ ಹೊರಬಂದರು. ವಿದೇಶದಲ್ಲಿ ವ್ಯಾಸಂಗಮಾಡುವ ಅವಕಾಶ ಎಲ್ಲರಿಗೂ ಲಭಿಸುವುದಿಲ್ಲ. ಹಾಗೆ ಒಂದು ವೇಳೆ ಅಲ್ಲಿ ಅಧ್ಯಯನ ಮಡಲು ಹೋದವರೆಲ್ಲ ಶ್ರದ್ದೆಯಿಂದ ಶ್ರಮವಹಿಸಿ ಅಭ್ಯಾಸ ಮಾಡಿ ಪದವಿಗಳನ್ನು ಪಡೆಯುವುದು ಸಾಧ್ಯವಾಗುತ್ತಿಲ್ಲ. 2 ವರ್ಷಗಳ ಕಾಲ ಅಮೆರಿಕದಲ್ಲಿದ್ದ ಅವಧಿಯಲ್ಲಿ ಒಂದೊಂದು ಕ್ಷಣವನ್ನು ವ್ಯರ್ಥಮಾಡದೆ ವಿವಿಧ ಮೂಲಗಳಿಂದ ಮಾಹಿತಿಯನ್ನುಸಂಗ್ರಹಿಸಿ ಅದನ್ನು ವಿಶ್ಲೇಷಣೆ ಮಾಡಿ ಒಂದು ಪ್ರೌಢ ಪ್ರಬಂಧವನ್ನು ರಚಿಸಿ ಪಿ.ಎಚ್.ಡಿ ಪದವಿಯನ್ನು ಪಡೆದರು. ಅವರು ಬರೆದ ಮಹಾಪ್ರಬಂಧವನ್ನು ಅನೇಕ ದೇಶಿಯ ವಿದೇಶಿಯ ವಿದ್ವಾಂಸರು ಮೆಚ್ಚುಗೆ ವ್ಯಕ್ತಪಡಿಸಿದರು.

ಅನೇಕ ಸಂಶೋಧನಾ ವಿದ್ಯಾರ್ಥಿಗಳು ತಮ್ಮ ಸಂಶೋಧನೆಯನ್ನು ಮುಗಿಸಿ ಪಿ.ಹೆಚ್.ಡಿ ಪದವಿಯನ್ನು ನಂತರ ಸಂಶೋಧನೆಯನ್ನು ಪೂರ್ಣವಾಗಿ ಮರೆತು ಬಿಡುತ್ತಾರೆ. ಬಹಳಷ್ಟು ವಿದ್ಯಾರ್ಥಿಗಳಿಗೆ ಅದು ಅಧ್ಯಾಪಕ ವೃತ್ತಿ ಪಡೆಯಲು ಅಗತ್ಯವಾದ ಒಂದು ಸಾಧನ. ಆದರೆ ಪ್ರೊ.ಶ್ರೀನಿವಾಸರವರಿಗೆ ಸಂಶೋಧನೆ ಅವರ ಬಾಳಿನುದ್ದಕ್ಕು ಬೆಳೆದುಬಂದಿದ್ದ ಒಂದು ಅವಿನಾಭಾವ ಹೊಂದಿದ್ದ ಕಾರ್ಯವಾಗಿದ್ದಿತು. ಅವರು ಪಿ.ಎಚ್.ಡಿ. ಪದವಿಗಾಗಿ ಸಂಶೋಧನೆ ಕೈಗೊಳ್ಳುವ ಮೊದಲೆ ಹಲವಾರು ಗ್ರಂಥಗಳನ್ನು ಬರೆದು ಪ್ರಸಿದ್ದರಾಗಿದ್ದರು. ಅನೇಕ ಪ್ರಶಸ್ತಿಗಳನ್ನು ಪಡೆದಿದ್ದರು ಹೀಗಾಗಿ ಅಧ್ಯಯನ ಸಂಶೋಧನೆ ಅವರ ಒಂದು ಅವಿಭಾಜ್ಯ ಭಾಗ ಅದು ಅವರ ವೃತ್ತಿಗೆ ಸಹಕಾರಿಯಾಗಿದ್ದು ನಿಜವಾದರೂ ನಿವೃತ್ತಿಯ ನಂತರವು ಮುಂದುವರಿಯುತ್ತಲೆ ಇದೆ.

ಪ್ರೊ, ಶ್ರೀನಿವಾಸರವರ ವಿದ್ವತ್ತು ಹಾಗೂ ವೈಚಾರಿಕತೆ, ಕಲಾಭಿಜ್ಞತೆ ಬಹು ಅಪೂರ್ವವಾದವು ಎಲ್ಲಿಯೂ ಸಹ ಜ್ಞಾನ ದಾಹಕ್ಕಾಗಿ ಜ್ಞಾನದಾಹದಿಂದ ತಮ್ಮ ಜ್ಞಾನಯಜ್ಞವನ್ನು ನಡೆಸಿಕೊಂಡು ಹೋದರು. ಅವರಲ್ಲಿದ್ದ ಅಪಾರವಾದ ದಾರುಣ ಶಕ್ತಿ ಅವರ ವಿದ್ಯಾಭ್ಯಾಸಕ್ಕೆ ಸಹಾಯಕವಾಗಿ ನಿಂತಿದ್ದರು. ಪರೀಕ್ಷೆಯಲ್ಲಿ ಅಂಕಗಳನ್ನು ಗಳಿಸುವುದೊಂದೆ ಅವರ ಗುರಿಯಾಗಿರಲಿಲ್ಲ. ಓದಬೇಕು, ತಿಳಿದುಕೊಳ್ಳಬೇಕು ಲೋಕಾನುಭವವನ್ನು ವಿಸ್ತರಿಸಿಕೊಳ್ಳಬೇಕು ಎಂಬ ಕಾರ್ಯಕ್ಷೇತ್ರವಾಗಿ ಶಿಕ್ಷಣ ಕ್ಷೇತ್ರದಲ್ಲಿ ಉನ್ನತ ಮಟ್ಟದಲ್ಲಿ ತೇರ್ಗಡೆಹೊಂದಿ ಮುಂದೆ ಸಾಗಿದರು ಅವರ ಶೈಕ್ಷಣಿಕ ರಂಗದಲ್ಲಿ ಎಲ್ಲ ಅಧ್ಯಾಪಕರ ಮೆಚ್ಚುಗೆಯನ್ನು ಪ್ರೋತ್ಸಾಹವನ್ನು ಗಳಿಸುತ್ತಾಹೋದರು ಆದರೆ ಮಹಾರಾಜ ಕಾಲೇಜಿನಲ್ಲಿ ಮತ್ತು ಎಂ.ಎ ಓದುತ್ತಿರುವ ಎಲ್ಲಾ

ಪ್ರಾಧ್ಯಾಪಕರು ಉನ್ನತ ಮಟ್ಟದ ವಿದ್ವಾಂಸರು ವಿಶಾಲ ಹೃದಯದವರು ಆಗಿರಲಿಲ್ಲ ಕೆಲವರು ಸಂಕುಚಿತ ಮನೋಭಾವದವರು ಇದ್ದರು ಈವೇಳೆಗಾಗಲೇ ಶ್ರೀನಿವಾಸರು ಸ್ವತಂತ್ರವಾಗಿ ಜ್ಞಾನಾರ್ಜನೆಯನ್ನು ಮಾಡಿಕೊಳ್ಳುವಷ್ಟು ಸಮರ್ಥರಾಗಿದ್ದರು.

ಹೀಗೆ ಪ್ರತಿಯೊಂದು ಹಂತದಲ್ಲೂ ಒಂದಲ್ಲ ಒಂದು ಸಮಸ್ಯೆಯನ್ನು ಅವರು ಎದುರಿಸಬೇಕಾಯಿತು. ಉಪಯುಕ್ತವಾದ ಮಾರ್ಗದರ್ಶನವಾಗಲೀ ಅಗತ್ಯವಾದ ಸಲಹೆ ಸಹಾಯ ಮಾಡುವರು ವಿರಳವಾಗಿದ್ದರು ಮಹಾರಾಜ ಕಾಲೇಜಿನಲ್ಲಿದ್ದ ಪ್ರಾಧ್ಯಾಪಕ ಶ್ರೀಕಂಠಶಾಸ್ತ್ರಿಗಳು ಇತಿಹಾಸದಲ್ಲಿ ಅದ್ವಿತೀಯವಾದ ಪಾಂಡಿತ್ಯವನ್ನು ಪಡೆದಿದ್ದವರು. ಅವರ ಮಾತ್ರ ಶ್ರೀನಿವಾಸರ ಬಗ್ಗೆ ಆಸಕ್ತಿ ಅಭಿಮಾನವನ್ನು ಹೊಂದಿದ್ದು ಅವರಿಗೆ ಅನೇಕ ರೀತಿಯಲ್ಲಿ ಮಾರ್ಗದರ್ಶನ ಮಾಡಿದರು. ಎಂ.ಎ ಪದವಿ ಪಡೆದು ಅಧ್ಯಾಪಕ ವೃತ್ತಿಯನ್ನು ಕೈಗೊಂಡ ಮೇಲೆ ಸ್ವತಂತ್ರವಾಗಿ ಕೃತಿ ರಚನೆಯನ್ನು ಕೈಗೊಂಡರು ಸಾಹಿತ್ಯದಲ್ಲಿ ಬಾಲ್ಯದಿಂದಲೂ ವಿಶೇಷವಾದ ಒಲವು ಶ್ರದ್ದೆಇದ್ದಿದರಿಂದ ಅವರು 3 ಐತಿಹಾಸಿಕ ಕಾದಂಬರಿಗಳನ್ನು ರಚಿಸಿದರು. ಈ ಕಾದಂಬರಿಗಳು ಅವರಿಗೆ ಅತಿಶಯವಾದ ಕೀರ್ತಿಯನ್ನು ತಂದುಕೊಟ್ಟವು. ಅವರು ಸಾಹಿತ್ಯದ ಕ್ಷೇತ್ರದೊಂದಿಗೆ ಇತಿಹಾಸ ಸಂಶೋಧನೆಯನ್ನು ಜೊತೆ ಜೊತೆಯಾಗಿ ಮುಂದುವರಿಸಿದರು. ಅವರು ಬರೆದ ಕೃತಿಗಳುಲ್ಲೂ ವೈವಿಧ್ಯವನ್ನು ಕಾಣಬಹುದಾಗಿದೆ. ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಕೆಲವು ಪ್ರಕಾಶಕರು ಒತ್ತಾಯ ಮಾಡಿ ಅವರಿಂದ ಪ್ರಪಂಚ ಚರಿತ್ರೆ (ಎಸ್.ಸತ್ಯನಾರಾಯಣ ರಾವ್ ) ರವರೊಂದಿಗೆ ಎಂಬ ಪುಸ್ತಕವನ್ನು ಬರೆಸಿದರು. ಈ ಪುಸ್ತಕವು ವಿದ್ಯಾರ್ಥಿಗಳ ಅಧ್ಯಾಪಕರ ಮೆಚ್ಚುಗೆಯನ್ನು ಗಳಿಸುವಲ್ಲಿ ಯಶಸ್ವಿಯಾಯಿತು. ಆದರೆ ಅವರು ಮತ್ತೆ ಲಾಭಕ್ಕಾಗಾಗಲಿ ಕೀರ್ತಿಗಾಗಲೀ ಕೃತಿ ರಚನೆಗೆ ಕೈಹಾಕಲಿಲ್ಲ, ಇತಿಹಾಸ ಗೋಷ್ಠಿ ಅವುಗಳಲ್ಲಿ ಭಾಗವಹಿಸಬೇಕೆಂದು ಸಂಘಟಕರಿಂದ ಒತ್ತಾಯ ವಿರುತ್ತಿದ್ದುದು ಸ್ವಾಭಾವಿಕವಾಗಿದ್ದಿತು. ಅದರ ಪರಿಣಾಮವಾಗಿ ಸದಾ ಕಾಲ ಒಂದು ಒಂದು ಸಂಶೋಧನಾ ಪ್ರಬಂಧ ಲೇಖನ ಇವುಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಿದ್ದರು. ಹೀಗಾಗಿ ಶ್ರೀನಿವಾಸರವರು 25ಕ್ಕೂ ಹೆಚ್ಚು ಗ್ರಂಥಗಳನ್ನು ಸುಮಾರು 150 ಸಂಶೋಧನಾ ಲೇಖನಗಳನ್ನು ಪ್ರಕಟಿಸಿದ್ದಾರೆ. ಇದರೊಂದಿಗೆ ಸುಮಾರು 50 ಆಕಾಶವಾಣಿ ಭಾಷಣಗಳನ್ನು ನುರಾರು ಸಭೆ ಸಮಾರಂಭಗಳಲ್ಲಿ ವಿವಿಧ ವಿಷಯಗಳನ್ನು ಕುರಿತು ಭಾಷಣಗಳನ್ನು ಮಾಡಿದರು. ಆದರೆ ಅವುಗಳನ್ನೆಲ್ಲ ಸಂಗ್ರಹಿಸಿ ಪುಸ್ತಕಗಳನ್ನು ಮಾಡುವಂತೆ ಸ್ನೇಹಿತರು ಪ್ರಕಾಶಕರು ಒತ್ತಾಯಮಾಡಿದರು. ಆದರೆ ಪ್ರತಿದಿನವು ಒಂದು ಹೊಸ ವಿಷಯವನ್ನು ಕುರಿತು ಚಿಂತನೆ. ಯಾವುದೋ ಗೋಷ್ಠಿಗೆ ಭಾಷಣಕ್ಕೆ ಸಿದ್ದತೆ ಇವುಗಳಲ್ಲೆ ತೊಡಗಿರುವುದರಿಂದ ಅವರ ಎಲ್ಲಾ ಬರಹಗಳು ಗ್ರಂಥ ರೂಪದಲ್ಲಿ ಪ್ರಕಟಗೊಳ್ಳಲಿಲ್ಲ.

ಈ ಎಲ್ಲಾ ಕಾರಣಗಳಿಂದ ಪ್ರೊ.ಎಂ.ವಿ. ಶ್ರೀನಿವಾಸರವರ ಬೌದ್ಧಿಕ ಸಂಪತ್ತನ್ನು ಶೈಕ್ಷಣಿಕ ಸಾಧನೆಯನ್ನು ಯಾವುದೋ ಒಂದು ಚಟುವಟಿಕೆಗೆ ಸೀಮಿತಗೊಳಿಸುವುದು ಸರಿಯಲ್ಲ. ಅವರ ಎಲ್ಲಾ ಕಾರ್ಯ ಚಟುವಟಿಕೆಗಳನ್ನು ಒಟ್ಟಾಗಿ ಪರಿಶೀಲಿಸಿದಾಗ ಅವರ ವಿದ್ವತ್ತಿನ ಮಹತ್ವ ಅರಿವಾಗುತ್ತದೆ.

ಪ್ರೊ.ಎಂ.ವಿ.ಶ್ರೀನಿವಾಸರವರ ಶೈಕ್ಷಣಿಕ ಸಂಪತ್ತಿನ ಮತ್ತೊಂದು ಸಾಕ್ಷಿ ಎಂದರೆ ಅವರು ವೃತ್ತಿಯಿಂದ ನಿವೃತ್ತರಾಗಿದ್ದರು ಪ್ರವೃತ್ತಿಯಿಂದ ನಿವೃತ್ತರಾಗಿರಲಿಲ್ಲ. ಅವರ ನಿವೃತ್ತ ಜೀವನದಲ್ಲಿ

ಅವರಿಗೆ ವಿಶ್ರಾಂತಿಗೆ ಬದಲಾಗಿ ಮೊದಲಿಗಿಂತಲು ಹೆಚ್ಚು ಅಧ್ಯಯನ ಲೇಖನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ನಿತ್ಯವು ಏಳೆಂಟು (7–8) ಗಂಟೆಗಳಷ್ಟು ಕಾಲ ಗ್ರಂಥ ಅಭ್ಯಾಸ ಲೇಖನಗಳಲ್ಲಿ ತೊಡಗಿಸಿಕೊಳ್ಳುತ್ತಾರೆ. ಬೆಂಗಳೂರಿನ ರಾಜ್ಯ ಪತ್ರಗರ, ಮಿಥಿಕ್ ಸೋಸೈಟಿ ಮೊದಲಾದ ಗ್ರಂಥಾಲಯಗಳಿಗೆ ಪದೇ ಪದೇ ಭೇಟಿಕೊಟ್ಟು ತಮಗೆ ಬೇಕಾದ ವಿಷಯಗಳನ್ನು ಅಧ್ಯಯನ ಮಡಿ ಸಂಶೋಧನಾ ಲೇಖನಗಳ ರಚನೆಯಲ್ಲಿ ತೊಡಗುತ್ತಾರೆ. ಹೀಗೆ ನಾಡಿನ ಸಾಮಾಜಿಕ, ಸಾಂಸ್ಕೃತಿಕ ಜೀವನದಲ್ಲಿ ಅವರು ಬೆರೆತು ಹೋಗಿ ವಿವಿಧ ಕ್ಷೇತ್ರಗಲ್ಲಿ ತಮ್ಮ ಕೈಲಾದ ಸೇವೆಯನ್ನು ಮಾಡುತ್ತಾ ಸಾರ್ಥಕ ಜೀವನವನ್ನು ನಡೆಸುತ್ತಿದ್ದಾರೆ. ಕೆಲವು ಸಂಶೋಧಕರು, ಲೇಖಕರು, ಅವರನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಮಾರ್ಗದರ್ಶನ ಪಡೆದುಕೊಳ್ಳುತ್ತಾರೆ. ಆದರೆ ಸಂಶೋಧನೆ ಇತ್ತೀಚೆಗೆ ತನ್ನ ಮೌಲ್ಯವನ್ನು ಕಳೆದುಕೊಳ್ಳುವುದರಿಂದ ಅವರ ಅಪಾರ ಜ್ಞಾನ ಸಂಪತ್ತಿನ ಪೂರ್ಣ ಪ್ರಯೋಜನವನ್ನು ಪಡೆದುಕೊಳ್ಳುವುದು ಸಾಧ್ಯವಾಗುತ್ತಿಲ್ಲ.

ಶ್ರೀನಿವಾಸಂತಹ ಮೇಧಾವಿಗಳು ಅನುಭವಿ ಶಿಕ್ಷಣ ತಜ್ಞರು ನಮ್ಮ ನಾಡಿಗೆ ಅಮೂಲ್ಯವಾದ ಆಸ್ತಿ ಎಂದು ಹೇಳಬಹುದು. ಅವರ ವಿದ್ವತ್ತು, ಅನುಭವ ರಚನಾ ಕೌಶಲ್ಯ ಇವುಗಳನ್ನು ವಿಶ್ವವಿದ್ಯಾನಿಲಯದಲ್ಲಿಯೂ ಯು.ಜಿ.ಸಿ ಮೊದಲಾದ ಸಂಸ್ಥೆಗಳು ಪೂರ್ಣ ಪ್ರಮಾಣದಲ್ಲಿ ಬಳಸಿಕೊಳ್ಳದಿರುವುದು ದುರಾದೃಷ್ಟಕರ. ಅವರ ಅಪಾರ ಜ್ಞಾನ ರಾಶಿ ಅಪೂರ್ವ ಅನುಭವ ಇವುಗಳ ಸದ್ವಿನಿಯೋಗ ಆಗಬೇಕಾದುದು ಅತ್ಯಗತ್ಯ ಇದರಿಂದ ವಿದ್ಯಾರ್ಥಿಗಳು ಸಂಶೋಧಕರು, ಆದರೆ ನಮ್ಮ ಸರ್ಕಾರಗಳಾಗಲಿ ಇತರ ಖಾಸಗಿ ಸಂಸ್ಥೆಗಳಾಗಲಿ ತಮ್ಮದೇ ಆದ ಕೆಂಪು ಪಟ್ಟಿಯ ನೀತಿ ನಿಯಮಗಳನ್ನು ಅನುಸರಿಸಿ ಕೊಂಡು ಹೋಗುತ್ತಾರೆ. ಅದಕ್ಕೂ ಮಿಗಿಲಾಗಿ ಪ್ರಭಾವ ಸ್ವಾರ್ಥಸಾಧನೆ ಸಂಕುಚಿತ ಭಾವನೆ ಇವೆಲ್ಲವು ಶೈಕ್ಷಣಿಕ ಕ್ಷೇತ್ರದಲ್ಲೂ ಪ್ರವೇಶಿಸಿ ಪ್ರತಿಭೆ ಮತ್ತು ಸಾಮರ್ಥ್ಯಕ್ಕೆ ಸೂಕ್ತಸ್ಥಾನ ಸಿಗದಂತೆ ಈ ಮಹಾ ಪ್ರಬಂಧದಲ್ಲಿ ನಮ್ಮ ನಡುವೆ ಇರುವ ಒಬ್ಬ ಅಪರೂಪದ ಕರ್ಮಯೋಗಿ ನುರಿತ ವಿದ್ವಾಂಸ ಅನುಭವಿ ಪ್ರಾಧ್ಯಾಪಕನ ಜೀವನದ ಪರಿಚಯವನ್ನು ಮಾಡಿಕೊಡಲಾಗಿದೆ.

ಶ್ರೀನಿವಾಸರವರ ಜೀವನ ಬರೀ ಒಬ್ಬ ವ್ಯಕ್ತಿಯ ಜೀವನವಾಗಿ ಪರಿಗಣಿಸಲಾಗಿದೆ.. ಅದು ಒಂದು ಪೀಳಿಗೆಯ ಸಾಮಾಜಿಕ ಶೈಕ್ಷಣಿಕ ಸ್ಥಿತಿಯನ್ನು ಪ್ರತಿಬಿಂಬಿಸುವ ಒಂದು ಪ್ರಯತ್ನವಾಗಿದೆ. ಇನ್ನು ಕಾಡುತ್ತಿರುವ ಅನೇಕ ಸಮಸ್ಯೆಗಳಲ್ಲಿ ಶೈಕ್ಷಣಿಕ ಅಧಃಪತನ, ಕಳಪೆಮಟ್ಟದ ಸಂಶೋಧನೆ ಬೋಧನೆಯಲ್ಲಿ ನಿರಾಶಕ್ತಿ, ಮೊದಲಾದವು ವಿದ್ಯಾರ್ಥಿಗಳನ್ನು ತಮ್ಮ ಅಪೂರ್ವದ ಜ್ಞಾನರಾಶಿಯ ಬಲದಿಂದ ವಿಷಯದಲ್ಲಿ ಆಶಕ್ತಿ ವಹಿಸುವಂತೆ ಮಾಡಿ ಅವರು ಉತ್ತಮ ವಿದ್ವಾಂಸರಂತೆ ವಿರಳವಾಗುತ್ತಿದ್ದಾರೆ. ಹಾಗೆಯೇ ತಮ್ಮ ಜೀವನದ ಸ್ವಲ್ಪಭಾಗವನ್ನಾದರೂ ಚಿಂತನೆ ಸೋಶೋಧನೆ ಮತ್ತು ಉತ್ತಮ ಬೋಧನೆಗೆ ಮೀಸಲಾಡುವ ಮೇಷ್ಟುಗಳು ಬಹಳ ಅಪರೂಪವಾಗಿದ್ದಾರೆ. ಇಂತಹ ಸಂದರ್ಭದಲ್ಲಿ ಕೆಲವರಾದರು ನಾಡಿನ ಪ್ರಸಿದ್ಧ ಸಾಂಸ್ಕೃತಿಕ ಪರಂಪರೆಯನ್ನು ಶೈಕ್ಷಣಿಕ ಗುಣಮಟ್ಟವನ್ನು ಕಾಪಾಡಿಕೊಂಡು ಬರುವ ವ್ಯಕ್ತಿಗಳ ಉದಾ. ತೆಗೆದುಕೊಳ್ಳಲಾಗಿದೆ.

ಪ್ರೊ.ಶ್ರೀನಿವಾಸರ ಜೀವನ ಒಂದು ಸಾಹಸಮಯ ಯೋಶೋಗಾದೆಯಾಗಿ ವಿದ್ಯಾರ್ಥಿಗಳಿಗೆ, ಶೋಧಕರಿಗೆ ಬೋಧಕರಿಗೆ ಪ್ರೇರೇಪಿಸಿ ನೀಡಬಹುದಾಗಿದೆ. ಈ ದೃಷ್ಟಿಯಿಂದ ಈ

ಸಂಪ್ರಬಂಧದಲ್ಲಿ ಎಂ.ವಿ.ಎಸ್ ರವರ ಜೀವನದ ಒಂದು ಕಿರು ಚಿತ್ರವನ್ನು ನಿರೂಪಿಸಲು ಪ್ರಯತ್ತಿಸಲಾಗಿದೆ. ಇದು ಅವರ ಜೀವನ ಸಂಪೂರ್ಣ ಚರಿತ್ರಯೂ ಅಲ್ಲಿ ಅವರ ಕೃತಿಗಳ ಸಮಗ್ರ ವಿಮರ್ಶೆಯೂ ಅಲ್ಲ ಎಂಬುದನ್ನು ಇಲ್ಲಿ ಸ್ಪಷ್ಟಪಡಿಸಬೇಕಾಗಿದೆ. ಅಂತಹ ಕಾರ್ಯವನ್ನು ವಿದ್ವಾಂಸರು ಕೈಗೊಂಡರೆ ಕನ್ನಡ ನಾಡಿನ ಒಬ್ಬ ಶ್ರೇಷ್ಠ ಇತಿಹಾಸಕಾರನ ಮಹಾನ್ ವಿದ್ವಾಂಸನ ಬದುಕು ಕಟ್ಟಿಕೊಂಡ ರೀತಿ ಮತ್ತು ಸಮಾಜಕ್ಕೆ ಅವನ ಕೊಡುಗೆಯನ್ನು ಎತ್ತಿತೋರಿಸಿದ್ದಂತಾಗುತ್ತದೆ. ಈ ಕಾರ್ಯ ಅಗತ್ಯವಾಗಿ ಆಗಬೇಕಾಗಿದೆ.

**ಆಧಾರಗಳು**


1. ಜೇನ್ನುಡಿ ಸ್ಮರಣ ಸಂಚಿಕೆ (ತುಮಕೂರು 2010 ಫೇಬ್ರವರಿ)
2. ಪ್ರಜಾಪ್ರಗತಿ, ದಿನ ಪತ್ರಿಕೆ 2010
3. ಶಕ್ತಿ ದಿನ ಪತ್ರಿಕೆ ಮಡಿಕೇರಿ 19 ಮಾರ್ಚ್
4. ಬಲಿಜ ಬಿಂಬ ಸ್ಮರಣ ಸಂಚಿಕೆ ಮೈಸೂರು 1990
5. ಮಲ್ಲಾರ ವಾಣಿ ಮಾಸ ಪತ್ರಿಕೆ 7 ಡಿಸೆಂಬರ್ 1981 ಬೆಂಗಳೂರು
6. ಒಂಟದನಿ ಮಾಸ ಪತ್ರಿಕೆ ಬೆಂಗಳೂರು 11 ನವೆಂಬರ್ 2011
7. ಮೈಸೂರು ಜಿಲ್ಲ ದರ್ಶನ ಮೈಸೂರು 2009
8. ಇತಿಹಾಸ ದರ್ಪಪ ಸಂದರ್ಶನ ನವೆಂಬತ್ 2010
9. Study in Karnataka history the culture ವಿರುತ್ತಪ್ಪ


**ಸಂದರ್ಶನ / ವಕ್ತ್ರಗಳು:**

| | | |
|---|---|---|
| ಸಂಚಿಕೆ | 2 | 1982 |
| ಸಂಚಿಕೆ | 7 | 1987 |
| ಸಂಚಿಕೆ | 23 | 2008 |

1. ಡಾ॥ ಬಿ.ಎ ಇಂದಿರಾ ಸಂಶೋಧನಾ ವಿದ್ಯಾರ್ಥಿನಿ ಇತಿಹಾಸ ಸಹ ಪ್ರಾಧ್ಯಾಪಕರು
2. ತಿರುಮಲೆ ಶ್ರೀ ರಂಗಾಚಾರ್ ಪತ್ರಕರ್ಥರು, ಸಂಶೋಧಕರು
3. ಡಾ॥ ವಿ. ಅನುರಾಧ ಸಹ ಪ್ರಾಧ್ಯಾಪಕರು ಇತಿಹಾಸ ವಿಭಾಗ ಬೆಂಗಳೂರು
4. ಡಾ॥ ಜ್ಯೋತಿ ಬಾಯಿ
5. ಡಾ॥ ಸುಧಾರಾವ್
6. ಕೆ.ಎಸ್. ರಾಜಣ್ಣ ಹಿರೇಹಳ್ಳಿ
7. ಪ್ರೋ॥ ಎಚ್.ಆರ್. ದಾಸೇಗೌಡ
8. ಡಾ॥ ಎಸ್ ಹರ್ಷ ಎಂ.ವಿ.ಶ್ರೀನಿವಾಸ್
   ಸಹ ಪ್ರಾಧ್ಯಾಪಕರು ಸೆಂಟ್ರಲ್ ವಿ.ವಿ.ಫಿಲ್ ಚೆರ್ ಅಸ್ಸಾಂ
9. ಶ್ರೀಮತಿ ಸರೋಜಾ (ಪತ್ನಿ)
10. ಡಾ॥ ನಂದೀಶ್ವರ
11. ಪ್ರೋ. ಚಂದ್ರಪ್ಪ
12. ಎನ್. ಸಿ. ನಂಜುಂಡಯ್ಯ

# ೧. ಅಧ್ಯಕ್ಷ ಭಾಷಣ

*ಡಾ. ಎಂ. ವಿ. ಶ್ರೀನಿವಾಸ್*

ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಸಂಗ್ರಹಾಲಯ ಇಲಾಖೆಯು, ವಿವಿಧ ಜಿಲ್ಲೆಗಳ ಇತಿಹಾಸ ಮತ್ತು ಸಂಸ್ಕೃತಿಯನ್ನು ಕುರಿತ ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಅವುಗಳಲ್ಲಿ ಮಂಡಿಸಿದ ಪ್ರಬಂಧಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುತ್ತಾ ಬಂದಿದೆ. ಇದುವರೆಗೂ ಈ ರೀತಿಯಲ್ಲಿ ೧೨ ಜಿಲ್ಲೆಗಳ ಇತಿಹಾಸವನ್ನು ಕುರಿತ ಗೋಷ್ಠಿಗಳು ಸಂಬಂಧಪಟ್ಟ ಜಿಲ್ಲೆಗಳಲ್ಲಿ ನಡೆದಿವೆ. ಇಂದು ನಡೆಯುತ್ತಿರುವ "ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ" ವಿಚಾರ ಸಂಕೀರ್ಣವು ವೈಶಿಷ್ಟ್ಯ ಪೂರ್ಣ ವೆಂದು ಭಾವಿಸುತ್ತೇನೆ. ಮೈಸೂರು ಎಂದಾಗ ಅದು ಒಂದು ಜಿಲ್ಲೆ, ಒಂದು ನಗರ ಮತ್ತು ರಾಜ್ಯವನ್ನು ಸೂಚಿಸುತ್ತದೆ. ಇವು ಮೂರು ಭಿನ್ನವಾದರೂ ಅವುಗಳ ಇತಿಹಾಸದಲ್ಲಿ ಪರಸ್ಪರ ಸಂಬಂಧವಿರುವುದನ್ನು ಗುರುತಿಸಬಹುದು. ಇದುವರೆವಿಗೂ ನಡೆದಿರುವ ಜಿಲ್ಲೆಗಳೆಲ್ಲವುಗಳಿಂದಲೂ ಮಕುಟಪ್ರಾಯವಾಗಿರುವ ಮೈಸೂರು ಜಿಲ್ಲೆಯಾಗಿ ರಾಜ್ಯವಾಗಿ ನಗರವಾಗಿ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ.

ದಕ್ಷಿಣ ಕರ್ನಾಟಕದ ಹಲವಾರು ಜಿಲ್ಲೆಗಳಂತೆ ಮೈಸೂರು ಜಿಲ್ಲೆಗೂ ವಿಶಿಷ್ಟವಾದ ಸಂಸ್ಕೃತಿಯಿದೆ. ಈ ಹಿಂದಿನ ವಿಚಾರಗೋಷ್ಠಿಗಳಲ್ಲಿ ಮಾಡಿದಂತೆ ಈ ಜಿಲ್ಲೆಯ ಸಾಂಸ್ಕೃತಿಕ ಜೀವನವನ್ನು ಸಂಕ್ಷೇಪವಾಗಿ ಚಿತ್ರಿಸುವುದು, ಈ ಸಂಸ್ಕೃತಿ ಬೆಳೆದುಬಂದ ಬಗ್ಗೆಯನ್ನು ನಿರೂಪಿಸುವುದು, ಅದರ ಪ್ರಮುಖ ಲಕ್ಷಣಗಳನ್ನು ಚರ್ಚಿಸುವುದು ಇಲ್ಲಿ ಪ್ರಸ್ತುತವೆಂದು ಭಾವಿಸುತ್ತೇವೆ.

ಎಂದಿನಂತೆ ಒಂದು ಪ್ರದೇಶದ ಜೀವನವಿಧಾನವು ಬೆಳೆದು ಬಂದ ರೀತಿಯನ್ನು ಅದರ ಮೇಲೆ ಪ್ರಭಾವ ಬೀರಿದ ಶಕ್ತಿಗಳನ್ನೂ ಇಂದು ವಿಶ್ಲೇಷಿಸುವುದು ಸೂಕ್ತವೆಂದು ಭಾವಿಸುತ್ತೇನೆ. ಅದಕ್ಕೂ ಮುಂಚೆ ಇಲ್ಲಿನ ಭೌಗೋಳಿಕ ಮತ್ತು ಸಾಮಾಜಿಕ ಪರಿಸರವನ್ನೂ ಅಭ್ಯಾಸಮಾಡುವುದು ಅಗತ್ಯವಾಗಿದೆ.

ದಕ್ಷಿಣ ಭಾರತದ ಹೃದಯ ಭಾಗದಲ್ಲಿರುವ ಮೈಸೂರು ಜಿಲ್ಲೆ ಕರ್ನಾಟಕದ ದಕ್ಷಿಣದ ಪೂರ್ವಭಾಗದಲ್ಲಿರುವ ಒಂದು ಪ್ರದೇಶ. ಇದೊಂದು ಪ್ರಾಕೃತಿಕವಾಗಿ ಕೆಲವು ಲಕ್ಷಣಗಳನ್ನು ಹೊಂದಿದೆ. ಮೈಸೂರು ನೈಸರ್ಗಿಕವಾಗಿ, ಪ್ರಾಪಂಚಿಕವಾಗಿ, ಸಾಂಸ್ಕೃತಿಕವಾಗಿ ಸಂಪದ್ಭರಿತವಾದ ಜಿಲ್ಲೆಯಲ್ಲಿ ನಾಡಿನ ಇತಿಹಾಸದಲ್ಲಿ ಮಹತ್ವ ಪಾತ್ರವನ್ನು ಬೀರಿದೆ. ಈ ಜಿಲ್ಲೆಯ ಹಲವಾರು ನದಿಗಳು, ಪರ್ವತಗಳು, ಅರಣ್ಯಗಳು ಈ ಪ್ರದೇಶವನ್ನು ಸಂಪದ್ಭರಿತವಾಗಿ ಮಾಡಿವೆ. ಪ್ರಾಚೀನ ಕಾಲದಿಂದಲೂ ಇದು ಮಾನವನ ನೆಲೆಯಾಗಿದ್ದ ಸುದೀರ್ಘವಾದ ಇತಿಹಾಸವನ್ನು ಹೊಂದಿದೆ. ಕರ್ನಾಟಕದ ಹಲವಾರು ಭಾಗಗಳಂತೆ ರಾಮಾಯಣ, ಮಾಹಾಭಾರತ ಮತ್ತು ಪೌರಾಣಿಕ ಪ್ರಸಂಗಗಳು ಈ ಜಿಲ್ಲೆಯ ಹಲವಾರು ಭಾಗಗಳಲ್ಲಿ ನಡೆದಿರುವ ಬಗ್ಗೆ ಐತಿಹ್ಯಗಳು ದೊರಕುತ್ತವೆ. ಹಳೆಶಿಲಾಯುಗದ ಮಾನವ ಜಿಲ್ಲೆಯಲ್ಲಿ ಕೆಲವು ಭಾಗದಲ್ಲಿದ್ದ ಕುರುಹುಗಳಿವೆ. ಹಾಗೆಯೇ ನವಶಿಲಾಯುಗದ ಸಂಸ್ಕೃತಿಯ ಕುರುಹುಗಳೂ ಗೋಚರಿಸುತ್ತವೆ.

ಮೈಸೂರು ಜಿಲ್ಲೆಯ ಸುದೀರ್ಘ ಇತಿಹಾಸದಲ್ಲಿ ಹಲವಾರು ರಾಜವಂಶಗಳು ಬಂದುಹೋಗಿವೆ. ಪ್ರಾಚೀನ ಕಾಲದಲ್ಲಿ ಮಹಿಷಮಂಡಲವೆಂಬ ಅಭಿಧಾನ ಹೊಂದಿದ್ದ ಈ ಪ್ರದೇಶಕ್ಕೆ ಅಶೋಕನು ಬೌದ್ಧ ಭಿಕ್ಷುಗಳನ್ನು ಕಳುಹಿಸಿದ್ದುದಕ್ಕೆ ಆಧಾರಗಳು ದೊರಕುತ್ತವೆ.

ಅದಕ್ಕೂ ಮೊದಲೇ ಜೈನ ಯತಿಗಳು ಪುನ್ನಾಟಕ್ಕೆ ಬಂದಿದ್ದರೆಂಬುದನ್ನೂ ಗಮನಿಸಿದಾಗ ಇಲ್ಲಿ ಜೈನಧರ್ಮವು ನೆಲೆಸಿದ್ದಿತೆಂದು ಊಹಿಸಬಹುದಾಗಿದೆ. ಪುನ್ನಾಟ ಅಥವಾ ಪುನ್ನಾಡದ ಹೆಸರು ರೋಮನ್ನರ ಬರವಣಿಗೆಗಳಲ್ಲಿ ಕಂಡುಬರುತ್ತದೆ.

ಡಾ.ಶೆಟ್ಟರ್ ಅವರು ತಮ್ಮ ಇತ್ತೀಚಿನ, ಶಂಗಮ್, ತಮಿಳಗಂ ಕೃತಿಯಲ್ಲಿ ಒಂದು ಸ್ವಾರಸ್ಯವಾದ ವಿಷಯನನ್ನು ಪ್ರಸ್ತಾಪಿಸುತ್ತಾರೆ. ಮೈಸೂರು ಜಿಲ್ಲೆ ಮತ್ತು ಸಮೀಪದ ಪ್ರದೇಶಗಳಿಂದ ಜನರು ತಮಿಳುನಾಡಿಗೆ ಸಂಗಂಪೂರ್ವಕಾಲದಲ್ಲಿ ವಲಸೆ ಹೋಗಿದ್ದರೆಂದು ಅವರು ದಾಖಲಿಸಿದ್ದಾರೆ. ಒಟ್ಟಿನಲ್ಲಿ ಮೈಸೂರು ಜಿಲ್ಲೆಗೆ ತನ್ನದೇ ಸುದೀರ್ಘವಾದ ಇತಿಹಾಸವಿರುವುದು

ಸ್ಪಷ್ಟವಾಗುತ್ತದೆ. ಕ್ರಿ ಶ. ನಾಲ್ಕನೆಯ ಶತಮಾನದಿಂದ ಆಳಿದ ಗಂಗರ ಕಾಲದಿಂದ ಜಿಲ್ಲೆಯ ಇತಿಹಾಸ ಸ್ಪಷ್ಟವಾಗಿ ಪ್ರಾರಂಭ ವಾಗುತ್ತದೆ. ಮೈಸೂರು ಜಿಲ್ಲೆಯ ತಲಕಾಡು ಗಂಗರ ರಾಜಧಾನಿಯಾಗಿದ್ದು ೧೦ನೆಯ ಶತಮಾನದ ಅಂತ್ಯದವರೆಗೂ ಜಿಲ್ಲೆಯ ಬಹುಭಾಗದ ಮೇಲೆ ಗಂಗ ವಂಶದ ಅರಸನು ಒಡೆತನ ಹೊಂದಿದರು.

ಆದರೆ ೧೦೦೪ರಲ್ಲಿ ಚೋಳರ ರಾಜರಾಜನು ಗಂಗರನ್ನು ಸೋಲಿಸಿ ಮೈಸೂರು ಜಿಲ್ಲೆಯನ್ನು ಚೋಳಸಾಮ್ರಾಜ್ಯಕ್ಕೆ ಸೇರಿಸಿದ ಮುಂದೆ ೧೧೧೬ರಲ್ಲಿ ವಿಷ್ಣುವರ್ಧನನು ಚೋಳರಿಂದ ತಲಕಾಡನ್ನು ಗೆದ್ದು ಜಿಲ್ಲೆಯ ಪ್ರದೇಶವನ್ನು ಹೊಯ್ಸಳ ಸಾಮ್ರಾಜ್ಯಕ್ಕೆ ಸೇರಿಸಿದ. ಹೊಯ್ಸಳರ ನಂತರ ವಿಜಯನಗರದ ಅರಸರು ಜಿಲ್ಲೆಯ ಒಡೆಯರಾದರು. ಹದಿನಾರನೆಯ ಶತಮಾನದವರೆಗೂ ಈ ಪ್ರದೇಶ ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದಿತು.

ತದನಂತರ ಆಳಿದ ಮೈಸೂರು ಒಡೆಯರು ಮೈಸೂರು ವಿಭಾಗವನ್ನು ದೀರ್ಘ ಕಾಲ(೫ ಶತಮಾನಗಳು) ಆಳಿದ ರಾಜವಂಶ.

ವಿಜಯನಗರದ ರಾಜ್ಯಪಾಲನಿಂದ ಶ್ರೀರಂಗಪಟ್ಟಣವನ್ನು ವಶಕ್ಕೆ ತೆಗೆದುಕೊಂಡ ರಾಜ ಒಡೆಯರನ್ನು ಈ ರಾಜಸಂತತಿಯ ನಿಜವಾದ ಸ್ಥಾಪಕನೆಂದು ಕರೆಯಲಾಗಿದೆ. ಕಂಠೀರವ ನರಸರಾಜ ಒಡೆಯರು ಸಾಹಸಿಗಳೂ, ಪರಾಕ್ರಮಶಾಲಿಗಳೂ ಆಗಿದ್ದು ತಮ್ಮ ರಾಜ್ಯವನ್ನು ಎಲ್ಲಕಡೆಯೂ ವಿಸ್ತರಿಸಿದರು. ಚಿಕ್ಕದೇವರಾಜ ಒಡೆಯರು ಪ್ರಾರಂಭದ ಒಡೆಯರಲ್ಲಿ ಅತ್ಯಂತ ಪ್ರಮುಖರು. ಇವರನ್ನು ಸಾಕಿ ಆಧುನಿಕ ಕರ್ನಾಟಕದ ನಿರ್ಮಾಪಕರೆಂದು ಕರೆಯುತ್ತಾವೆ.

Chikkadevaraya Wodeyar implemented a series of measures which changed the very struchore of the state consolidated the monarchy and set into motion of process which spell the dawn of the modern age of Karnataka.

ಮೈಸೂರಿನ ಒಡೆಯರ್ ಅವರು ಪ್ರಗತಿಪರ ದರ್ಶಿಷ್ಠ ಪ್ರಭುತ್ವವನ್ನು ಅನುಸರಿಸಿ ಪ್ರಜಾನುರಾಗಿಗಳಾಗಿದ್ದರು. (ವಿಕ್ರಂ ಸಂಪತ್) ಒಬ್ಬ ಇತ್ತೀಚಿನ ಇತಿಹಾಸಕಾರರೊಬ್ಬರು ಒಡೆಯರು ಪ್ರತಿಭಾವಂತರೂ, ಶ್ರೇಷ್ಠಆಳಿತಗಾರರೂ, ಪ್ರಜಾನುರಾಗಿಗಳೂ ಆಗಿದ್ದರೆಂದು ಹೇಳುತ್ತಾರೆ.

೧೮ನೆಯ ಶತಮಾನದಲ್ಲಿ ಮೈಸೂರಿನಲ್ಲಿ ಆಳ್ವಿಕೆ ನಡೆಸಿದ ಹೈದರ್ ಮತ್ತು ಟೀಪ್ಪುಸುಲ್ತಾನರ ಕಾಲದಲ್ಲಿ ಮೈಸೂರು ಇತಿಹಾಸದಲ್ಲಿ ಒಂದು ಹೊಸ ಅಧ್ಯಾಯವು ಆರಂಭವಾಗುತ್ತದೆ. ಹೈದರ್ ಕರ್ನಾಟಕದ ಪಾಳೆಯಗಾರರನ್ನು ಅಡಗಿಸಿ ರಾಜ್ಯವನ್ನು ವಿಸ್ತರಿಸಿದ. ಟೀಪು ಹಲವಾರು ಆರ್ಥಿಕ ಸಾಮಾಜಿಕ ಸುಧಾರಣೆಗಳನ್ನು ಜಾರಿಗೆತಂದ. ಮುಮ್ಮಡಿ ಕೃಷ್ಣರಾಜರ ಆಳ್ವಿಕೆ ಸಾಹಿತ್ಯ, ಸಂಸ್ಕೃತಿಗಳ ಪ್ರಭಾವನೆಗೆ ಪ್ರಖ್ಯಾತವಾದುದು. ೧೯ನೆಯ ಶತಮಾನದ ಮಧ್ಯಭಾಗದಲ್ಲಿದ್ದ ಬ್ರಿಟಿಷ್ ಕಮೀಷನರ ಕಾಲದಲ್ಲಿ ಆಡಳಿತದಲ್ಲಿ ಕ್ರಾಂತಿಕಾರಕ ಸುಧಾರಣೆಗಳಾಗಿದ್ದುದಲ್ಲದೆ, ಪಾಶ್ಚಿಮಾತ್ಯ ನಾಗರಿಕತೆ ಮೈಸೂರು ರಾಜ್ಯದಲ್ಲಿ ಹರಡುತ್ತಹೋಯಿತು.

ಮುಂದೆ ಬಂದ ಚಾಮರಾಜ ಒಡೆಯರ ಕಾಲದಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಬೆಳವಣಿಗೆಯನ್ನು ಕಾಣಬಹುದಾಗಿದೆ. ಇದೇ ಸಮಯದಲ್ಲಿಯೇ ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ದೇಶೀಯ ಸಂಸ್ಥಾನದಲ್ಲಿ ಪ್ರಜಾಪ್ರತಿನಿಧಿಸಭೆ ಕಾರ್ಯವನ್ನು ಆರಂಭಿಸಿತು.

ಮುಂದೆ ಆಳಿದ ನಾಲ್ವಡಿ ಅವರ ಕಾಲದಲ್ಲಿ ಹಲವಾರು ಕ್ಷೇತ್ರಗಳಲ್ಲಿ ಅಭಿವೃದ್ಧಿಯುಂಟಾಯಿತು. ಒಬ್ಬ ಇತಿಹಾಸಕಾರನು ಹೇಳಿರುವಂತೆ Mysore has maintained a steady and satisfying rate of progress along all lines of national development and has attained a high place not only among the indian states but also among the princes of british India.

ಇಪ್ಪತ್ತನೆಯ ಶತಮಾನದಲ್ಲಿ ಒಡೆಯರ ಆಳಿಕೆಯಲ್ಲಿ ಅನೇಕ ಸಾಮಾಜಿಕ ಶಾಸನಗಳನ್ನು ಜಾರಿಗೆ ತರಲಾಯಿತು. ೧೯೧೬ರಲ್ಲಿ ಸ್ಥಾಪನೆಯಾದ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರಲ್ಲಿ ಜಾಗೃತಿಯನ್ನು ಮೂಡಿಸಿ ಕರ್ನಾಟಕದ ಏಕೀಕರಣದ ಅಡಿಪಾಯವನ್ನು ಹಾಕಿತು.

ಈ ಕಾಲದ ಮತ್ತೊಂದು ಮಹತ್ವದ ಬೆಳವಣಿಗೆಯೆಂದರೆ ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ. ಇದು ಉನ್ನತ ವ್ಯಾಸಂಗಕ್ಕೆ ಒಳ್ಳೆಯ ಅವಕಾಶವನ್ನು ಮಾಡಿಕೊಟ್ಟಿದ್ದಲ್ಲದೆ, ರಾಜ್ಯದ ಜನರಲ್ಲಿ ರಾಷ್ಟ್ರೀಯ ಜಾಗೃತಿಯನ್ನರಿಯುವಂತೆ ಮಾಡಿತು. ಕನ್ನಡನಾಡಿನ ಮೊದಲ ವಿಶ್ವ ವಿದ್ಯಾನಿಲಯವಾದ ಮೈಸೂರು ವಿಶ್ವವಿದ್ಯಾನಿಲಯವು ಪ್ರಚಾರೋಪನ್ಯಾಸಮಾಲೆ ಮೊದಲಾದ ಕಾರ್ಯಕ್ರಮಗಳ ಮೂಲಕ ಅಜ್ಞಾನವನ್ನು ತೊಡೆದುಹಾಕಲು ಪ್ರಾಮಾಣಿಕವಾಗಿ ಪ್ರಯತ್ನಿಸಿತು. ಎಸ್. ರಾಧಾಕೃಷ್ಣನ್, ಎಂ.ಹಿರಿಯಣ್ಣ ಮೊದಲಾದ ಮಹಾಮೇಧಾವಿಗಳನ್ನು ನೀಡಿತು. ಒರಿಯಂಟಲ್ ರಿಸರ್ಚ್ ಇನ್ಸ್ಟ್ಯೂಟ್ ಶಾಸನ ಶಾಸ್ತ್ರ ವಿಭಾಗ ಮುಂತಾದ ಸಂಸ್ಥೆಗಳು ನಾಡಿನ ಬೌದ್ಧಿಕ ವಿಕಾಸದಲ್ಲಿ ಮಹತ್ವದ ಪಾತ್ರವನ್ನು ವಹಿಸಿದವು. ಹೀಗೆ ಮೈಸೂರು ವಿಶ್ವವಿದ್ಯಾನಿಲಯ ಉನ್ನತ ಶಿಕ್ಷಣದ ಬೆಳವಣಿಗೆಗೆ ಅಮೂಲ್ಯಕೊಡುಗೆ ನೀಡಿದೆ.

ಮೈಸೂರು ನಗರದ ಸಾಂಸ್ಕೃತಿಕ ಸಾಮಾಜಿಕ ಇತಿಹಾಸವನ್ನು ಆಳವಾಗಿ ಅಭ್ಯಾಸಮಾಡಿ ಒಂದು ಸಂಪ್ರಬಂಧವನ್ನು ರಚಿಸಲು ಅವಕಾಶಗಳಿವೆ. ನಾಡಿನ ಸಾಮಾಜಿಕ ಇತಿಹಾಸದ ಅಧ್ಯಯನಕ್ಕೆ ಇದೊಂದು ಮಹತ್ವದ ಕೊಡುಗೆಯಾಗುವುದೆಂದು ಭಾವಿಸುತ್ತೇನೆ.

ಮೈಸೂರು ಜಿಲ್ಲೆಯ ಮಹೋನ್ನತ ಸಾಧನೆ ಸೇವೆಯೆಂದರೆ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅದು ನೀಡಿದ ಕೊಡುಗೆ. ರಾಜ್ಯದ ಅತಿ ಪ್ರಮುಖ ಮುಖಂಡರು ಮೈಸೂರಿನವರು. ಮೈಸೂರು ಜಿಲ್ಲೆಯವರು ಸ್ವಾತಂತ್ರ್ಯಸಂಗ್ರಾಮದ ಮುಂಚೂಣಿ ಯಲ್ಲಿದ್ದುದ್ದಲ್ಲದೆ ಇಲ್ಲಿನ ಬೆಳವಣಿಗೆ ಕರ್ನಾಟಕದ ಸ್ವಾತಂತ್ರ್ಯ ಸಂಗ್ರಾಮವನ್ನು ರೂಪಿಸಿತು. ಈ ಸಂದರ್ಭದಲ್ಲಿ ಹಾಗೂ ಇದಕ್ಕೆ ಮುಂಚೆ ಮೈಸೂರಿನಲ್ಲಿ ಪ್ರಾರಂಭವಾದ ಪತ್ರಿಕೆಗಳು ಜಿಲ್ಲೆಯ ಹಾಗೂ ನಾಡಿನ ಜನರಲ್ಲಿ ಜಾಗೃತಿಯನ್ನು ಮೂಡಿಸುವಲ್ಲಿ ಯಶಸ್ವಿಯಾಗಿದೆ. ಎಂ.ವೆಂಕಟಕೃಷ್ಣಯ್ಯ, ತಗಡೂರು ರಾಮಚಂದ್ರರಾವ್, ಸಾಹುಕಾರ್ ಚನ್ನಯ್ಯ ಮೊದಲಾದ ಮುಖಂಡರು ತಮ್ಮ ಅಪೂರ್ವ ತ್ಯಾಗ, ಸಂಘಟನೆ ಸೇವೆಗಳಿಂದ ಸ್ವಾತಂತ್ರ್ಯ ಚಳವಳಿಯನ್ನು ಮುನ್ನಡೆಸಿದರು.

೧೯ನೆಯ ಶತಮಾನದ ಅಂತ್ಯದಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಪ್ರಾರಂಭದಲ್ಲಿ, ಹೊರಬಂದ ದಿನ ಪತ್ರಕೆಗಳು, ವಾರ ಹಾಗೂ ಮಾಸಪತ್ರಿಕೆಗಳು ತಮ್ಮ ನಿರ್ಭೀತ ನಿಷ್ಪಕ್ಷಪಾತವಾದ ಟೀಕೆ ಟಿಪ್ಪಣಿಗಳಿಂದ ಸಮಾಜ ಹಾಗೂ ಸರ್ಕಾರವನ್ನು ತಿದ್ದುವ ಕೆಲಸವನ್ನು ಮಾಡುತ್ತಾ ಹೋದವು.

ರಾಜಧಾನಿ ಮೈಸೂರಿನಲ್ಲಿ ಎಲ್ಲ ರಾಜಕೀಯ ಮುಖಂಡರೂ ಹೋರಾಟಗಾರರೂ, ಸದಾ ಏನಾದರೂ ಕಾರ್ಯಕ್ರಮವನ್ನು ಹಾಕಿಕೊಳ್ಳುವುದರ ಮೂಲಕ ನಾಡಿನ ಸ್ವಾತಂತ್ರ್ಯ ಸಂಗ್ರಾಮವನ್ನು ಮುನ್ನಡೆಸಿದರು. ಮೈಸೂರನ್ನು ಆಳಿದ ಒಡೆಯರು ದಕ್ಷರೂ, ಸಮರ್ಥರೂ ಆಗಿದ್ದರೆಂದು ತಿಳಿಸುತ್ತ ವಿಕ್ರಂ ಸಂಪತ್ ಸವಾಲು ಜವಾಬು ತತ್ವದಂತೆ ಈ ರಾಜ್ಯದ ಇತಿಹಾಸದಲ್ಲಿ ಸಂದಿಗ್ಧ ಪರಿಸ್ಥಿತಿ ಬಂದೊದಗಿದಾಗಲೆಲ್ಲಾ ಒಬ್ಬ ಸಮರ್ಥ ನಾಯಕ ಅಧಿಕಾರಕ್ಕೆ ಬಂದು ಪರಿಸ್ಥಿತಿಯನ್ನು ನಿಭಾಯಿಸಿ ರಾಜ್ಯವನ್ನು ಪ್ರಗತಿಯ ಹಾದಿಯಲ್ಲಿ ಮುನ್ನಡೆಸುತ್ತಿದ್ದನೆಂದು ಅಭಿಪ್ರಾಯಪಡುತ್ತಾರೆ.

ಮೈಸೂರು, ರಾಜ್ಯದ ರಾಜಧಾನಿ ಮಾತ್ರವಲ್ಲದೆ, ರಾಜ್ಯದ ಸಾಂಸ್ಕೃತಿಕ ರಾಜಧಾನಿಯಾಗಿಯೂ ಆಗಿ ಮಹತ್ವದ ಪಾತ್ರವನ್ನೂ ನಿರ್ವಹಿಸಿದೆ. ಗ್ರೀಸ್ ದೇಶಕ್ಕೆ ಅಥೆನ್ಸ್ ಇದ್ದಂತೆ ಮಹಾರಾಷ್ಟ್ರಕ್ಕೆ ಪುಣೆಯಂತೆ ಮೈಸೂರು ವಿಶ್ವವಿದ್ಯಾನಿಲಯ. ಪ್ರಾಚ್ಯವಿದ್ಯಾಕೇಂದ್ರ (ORI) ಪುರಾತತ್ವ ವಿಭಾಗ Dept of Archacology and Musnems ಕೇಂದ್ರ, ಸರ್ಕಾರದ ಪುರಾತನ ಸರ್ವೇಕ್ಷಣ ವಿಭಾಗ Archacological Survey of India. Anthropological Survey of India. ಮಾನವಶಾಸ್ತ್ರ ಅಧ್ಯಯನ ಕೇಂದ್ರ ಭಾಷಶಾಸ್ತ್ರ ಕೇಂದ್ರ ಮೊದಲಾದ ಸಂಸ್ಥೆಗಳನ್ನೂ ಹೊಂದಿದ್ದು ರಾಷ್ಟ್ರದ ಒಂದು ಮಹತ್ವದ ಶೈಕ್ಷಣಿಕ ಕೇಂದ್ರವಾಗಿದೆ.

ಮೈಸೂರು ಪ್ರಾಚೀನ ಕಾಲದಿಂದಲೂ ತನ್ನ ಪ್ರಾಕೃತಿಕ ಸೌಂದರ್ಯಕ್ಕೂ, ಪ್ರಾಪಂಚಿಕ ಸಂಪತ್ತು ಕಲಾವೈಭವ ಸಾಹಿತ್ಯ ಸೌರಭಕ್ಕೆ ಪ್ರಸಿದ್ಧವಾಗಿವೆ. ಈ ಪ್ರದೇಶವನ್ನು ಆಳಿದ ರಾಜನು ಸಾಹಿತ್ಯ, ಕಲೆಗಳಿಗೆ ಪ್ರೋತ್ಸಾಹ ನೀಡಿ ಅವುಗಳನ್ನು ಬೆಳೆಸಿದರು. ಉತ್ತಮ ಆಳ್ವಿಕೆಯಿಂದ ಸಮಾಜದಲ್ಲಿ ಶಾಂತಿ ಭದ್ರತೆಯನ್ನು ಸ್ಥಾಪಿಸಿದರು.

ಮೈಸೂರು ನಗರ ಇತಿಹಾಸಕಾರರಿಗೆ ಚಿನ್ನದಗಣಿ. ಇಲ್ಲಿ ಇತಿಹಾಸ ನಿಶ್ಚಲವಾಗಿ ನಿಂತಿದೆ. ಎಷ್ಟೇ ಶತಮಾನಗಳು ಕಳೆದಿದ್ದರೂ ಅದರ ರೂಪ ಮತ್ತು ಭಾವದಲ್ಲಿ ಹೆಚ್ಚು ಬದಲಾವಣೆಗಳಾಗಿಲ್ಲ. ಮೈಸೂರು ನಗರ ಜೀವನದ ಬೆಡಗು ಬಿನ್ನಾಣಗಳ ದುರಾಸೆಗೆ ಪಕ್ಕಾಗಿಲ್ಲ. ಅದು ಪ್ರಾಪಂಚೀಕ ಭೋಗಜೀವನಕ್ಕೆ ಜೋತುಬೀಳದೆ ದೃಢವಾಗಿ ನಿಂತಿದೆ. ಇಲ್ಲಿನ

ಶ್ರೀಸಾಮಾನ್ಯನಿಗೆ ಇತಿಹಾಸ ಸತ್ತಿಲ್ಲ. ಅದು ಪಠ್ಯಪುಸ್ತಕಗಳ ಗುಡಾಣಗಳಲ್ಲಿ ಅಡಗಿಕುಳಿತಿಲ್ಲ. ಅದು ಅವರ ನಿದ್ದೆಯನ್ನೂ ಕೆಡಿಸುವ ನಿರ್ಜೀವ ವಿಷಯವಲ್ಲ. ಅವರ ನಿತ್ಯಜೀವನದ ಚೇತೋಹಾರಿ ಹಾಗೂ ಸಂದನಾಶೀಲ ಅಂಶವಾಗಿದೆ. ತಮ್ಮ ನಗರದ ಕೋಟೆ ಅರಮನೆ, ಹಿಂದಿನ ದೊರೆಗಳ ವಿಗ್ರಹಗಳತ್ತ ಒಮ್ಮೆಯಾದರೂ ದೃಷ್ಟಿಹಾಯಿಸಿ ತಮ್ಮ ಪ್ರಾಚೀನ ಪರಂಪರೆಯನ್ನು ಒಮ್ಮೆ ಸ್ಮರಿಸಿಕೊಳ್ಳುತ್ತಾರೆ. ಒಡೆಯರ ರಾಜ್ಯವು ಇಂದು ಇಲ್ಲದಿರಬಹುದು, ಆದರೆ ಅದು ಇಲ್ಲಿನ ಜನರ ಮನೋಭಾವದ ನೆನಪುಗಳು, ಆಲೋಚನೆಗಳಲ್ಲಿ ಜೀವಂತವಾಗಿದೆ.

ಮೈಸೂರು ನಗರದಲ್ಲಿ ನಡೆಯುವ ದಸರ ಹಬ್ಬದ ಸಂದರ್ಭದಲ್ಲಿ ಐತಿಹಾಸಿಕ ಮೈಸೂರು ತನ್ನ ನಿಜರೂಪದಿಂದ ಕಂಗೊಳಿಸುತ್ತದೆ. ಈ ಹತ್ತು ದಿನಗಳಲ್ಲಿ ನಗರದಲ್ಲಿ ಆಚರಿಸುವ ಧಾರ್ಮಿಕ ಆಚರಣೆಗಳು ಮನೆಮನೆಯಲ್ಲೂ ಆಚರಿಸುವ ಹಬ್ಬ, ಹರಿದಿನಗಳೂ, ಸಾಂಸ್ಕೃತಿಕ ಕಾರ್ಯಕ್ರಮಗಳೂ ಮೈಸೂರನ್ನು ಹಲವು ಶತಮಾನಗಳ ಹಿಂದಿನ ಕಾಲಕ್ಕೆ ಕೊಂಡೊಯ್ದು ದಿವ್ಯಾನುಭವವನ್ನು ನೀಡುತ್ತವೆ.

ಮೈಸೂರು ಲಲಿತ ಕಲೆಗಳ ಕೇಂದ್ರವಾಗಿ ಕಂಗೊಳಿಸುತ್ತ ಬಂದಿದೆ. ೧೯ನೆಯ ಶತಮಾನದಲ್ಲಿ ಮುಮ್ಮಡಿ ಕೃಷ್ಣರಾಜರು ಸಾಹಿತ್ಯ, ಚಿತ್ರಕಲೆ, ಭರತನಾಟ್ಯ, ಸಂಗೀತ ಮೊದಲಾದ ಕಲೆಗಳ ಬೆಳವಣಿಗೆಗೆ ಭದ್ರವಾದ ಬುನಾದಿಯನ್ನು ಹಾಕಿದರು. ವಿಜಯನಗರದ ವಿನಾಶದ ನಂತರ ಆ ಸಾಮ್ರಾಜ್ಯದಲ್ಲಿ ನೆಲೆಸಿದ್ದ ಹಲವಾರು ವಿದ್ವಾಂಸರೂ, ಕಲಾವಿದರೂ, ಮೈಸೂರಿನಲ್ಲಿ ನೆಲಸಿ ಇಲ್ಲಿನ ದೊರೆಗಳ ಪ್ರೋತ್ಸಾಹ ಪಡೆದರು.

೧೯ನೆಯ ಶತಮಾನದಲ್ಲಿ ನೃತ್ಯಕಲಾಶಾಲೆಯೊಂದು ಮೈಸೂರಿನಲ್ಲಿ ಸ್ಥಾಪನೆಯಾಗಿ ಮೈಸೂರು ಶೈಲಿಯ ವಿಶಿಷ್ಟ ಭರತ ನಾಟ್ಯ ಶೈಲಿಯ ಬೆಳವಣಿಗೆಗೆ ನಾಂದಿಯಾಯಿತು. ಸಂಗೀತ ಚಿತ್ರಕಲೆ ವಾಸ್ತುಶಿಲ್ಪ ಮೊದಲಾದ ಕ್ಷೇತ್ರಗಳಲ್ಲೂ ಈ ಅವಧಿಯಲ್ಲಿ ಗಮನಾರ್ಹವಾದ ಬೆಳವಣಿಗೆಯಾಯಿತು. ಒಟ್ಟಿನಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ್ ಆಳ್ವಿಕೆ ಕರ್ನಾಟಕ ಸಂಸ್ಕೃತಿಯ ಪುನರ್ರಚನೆಗೆ ಹಾಗೂ ಚೇತರಿಕೆಗೆ ಉತ್ತಮ ಅವಕಾಶವನ್ನುಂಟುಮಾಡಿತು ಎಂಬುದರಲ್ಲಿ ಸಂದೇಹವಿಲ್ಲ.

ಇನ್ನು ಚಾಮರಾಜ ಒಡೆಯರ ಕಾಲದ ಹಾಗೂ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೈಸೂರು ರಾಜ್ಯವು ಸಾಧಿಸಿದ ಪ್ರಗತಿ ಆಧುನಿಕ ಇತಿಹಾಸ.

ಮೈಸೂರು ರಾಜ್ಯವನ್ನು ಆಳಿದ ಅರಸರು ವಿವಿಧ ಕ್ಷೇತ್ರಗಳಿಗೆ ನೀಡಿದ ಕೊಡುಗೆಯನ್ನು ವಿವರಿಸುವುದು ನನ್ನ ಉದ್ದೇಶವಲ್ಲ. ಅವರು ಭಾರತದ ಇತರ ಭಾಗಗಳ ಆರ್ಳ ಸರಿಗೆ ಹೋಲಿಸಿದರೆ ಆದರ್ಶ ಪ್ರಭುಗಳಾಗಿ ಉತ್ತಮ ಆಡಳಿತಗಾರರಾಗಿ ಮೆರೆಯುತ್ತಾರೆಂಬುದರಲ್ಲಿ ಸಂದೇಹವಿಲ್ಲ. ಅವರ ಕೃಪಾಪೋಷಣೆಯಲ್ಲಿ ಅನೇಕ ಶಾಸ್ತ್ರಗಳೂ, ಕಲೆಗಳೂ ಅಭಿವೃದ್ಧಿ ಹೊಂದಿವೆ.

ಮೈಸೂರು ರಾಜ್ಯ ಹಾಗೂ ಜಿಲ್ಲೆಯನ್ನು ಕುರಿತು ಸಾಕಷ್ಟು ಇತಿಹಾಸ ಗ್ರಂಥಗಳೂ, ಇತರ ಕ್ಷೇತ್ರಗಳ ಬೆಳವಣಿಗೆಯ ಚಿತ್ರವನ್ನೂ ನೀಡುವ ಕೃತಿಗಳು ಸಾಕಷ್ಟು ಸಂಖ್ಯೆಯಲ್ಲಿ ಹೊರಬಂದಿವೆ.

ಈ ದಿನ ಮೈಸೂರನ್ನು ಕುರಿತು ನಡೆದಿರುವ ಅಧ್ಯಯನ ಎಷ್ಟರಮಟ್ಟಿಗೆ ಸಂಪೂರ್ಣವಾಗಿದೆ. ಸಮರ್ಪಕವಾಗಿದೆ ಎಂಬ ಬಗ್ಗೆ ನಿಮ್ಮ ಮುಂದೆ ಅವಲೋಕಿಸುವುದು ಅಗತ್ಯವೆಂದು ಭಾವಿಸುತ್ತೇನೆ.

ಮೈಸೂರು ಅರಸರ ಆಶ್ರಯದಲ್ಲಿದ್ದ ಅನೇಕ ವಿದ್ವಾಂಸರೂ ಲೇಖಕರೂ ರಾಜ್ಯದ ಯದುವಂಶದ ಇತಿಹಾಸವನ್ನು ಬರೆದಿಟ್ಟಿದ್ದಾರೆ. ಸುಮಾರು ಐನೂರು ವರ್ಷಗಳ ಮೈಸೂರು ಒಡೆಯರ ಇತಿಹಾಸವನ್ನು ಅಧ್ಯಯನ ಮಾಡಲು ಈ ಕೃತಿಗಳು ಸಹಾಯಕವಾಗಿವೆ. ಆದರೆ ಅವು ನಾಡಿನ ಜನಜೀವನವನ್ನು ವಿವಿಧ ಕ್ಷೇತ್ರಗಳಲ್ಲಿನ ಅಭಿವೃದ್ಧಿಯನ್ನು ಸ್ಪಷ್ಟವಾಗಿ ಯಥಾವತ್ತಾಗಿ ಪ್ರತಿಬಿಂಬಿಸುತ್ತವೆಯೋ ಎಂಬುದನ್ನು ನಾವಿಂದು ಪರಿಶೀಲಿಸಬೇಕಿದೆ.

೧೯ನೆಯ ಶತಮಾನದಿಂದಲೂ ಅನೇಕ ದಿಗ್ಗಜರು ಇಂಥ ಇತಿಹಾಸ ಕೃತಿಗಳನ್ನು ರಚಿಸುವಲ್ಲಿ ತೊಡಗಿದ್ದರೂ ಅವು ಅರಸರ ಕೃಪಾಶ್ರಯದಲ್ಲಿ ಅರಳಿದ ಕುಸುಮಾಗಳಾಗಿರುವುದರಿಂದ ಅವುಗಳಲ್ಲಿ ಸತ್ಯದ ಸೌರಭವನ್ನು ಕಾಣಲು ಸಾಧ್ಯವಿಲ್ಲವೆಂಬುದು ಅನೇಕ ಆಧುನಿಕ ವಿಮರ್ಶಕರ ಅಭಿಪ್ರಾಯವಾಗಿದೆ. ಇಂಥ ಐತಿಹಾಸಿಕ ಕೃತಿಗಳು ಜನಜೀವನದ ನಿಜವಾದ ಚಿತ್ರವನ್ನು ನೀಡುವುದಿಲ್ಲವೆಂದು ಇತಿಹಾಸಕಾರ ಸಾಕಿ ಕಟುವಾಗಿ ಟೀಕಿಸುತ್ತಾನೆ. ೧೯ನೆಯ ಶತಮಾನದಿಂದ ಬ್ರಿಟಿಷರ ಅಧೀನದಲ್ಲಿ ಬಾಳಬೇಕಾದ ಪರಿಸ್ಥಿತಿಯೊದಗಿ ಬಂದಿದ್ದರಿಂದ ರಾಜ್ಯದ ಪ್ರಗತಿ ಕುಂಠಿತವಾಯಿತೆಂದು ಈ ಇತಿಹಾಸಕಾರರು ವಾದಿಸುತ್ತಾರೆ.

ಬಿಜೋರ್ನ್ ಹೆಟ್ನೆ ತನ್ನ ಪ್ರಸಿದ್ಧ ಗ್ರಂಥದಲ್ಲಿ ಮೈಸೂರು ಪರೋಕ್ಷವಾದ ವಸಾಹತು ನಿಯತ್ರಣಕ್ಕೆ ಒಳಗಾಗಿದ್ದುದರಿಂದ ಅದು ಬೆಳೆಯಲು ಸಾಧ್ಯವಾಗಲಿಲ್ಲ. ರಾಜ್ಯದ ಮೂರನೆಯ ಒಂದು ಭಾಗದ ಆದಾಯವನ್ನು ನಾನಾರೂಪಗಳಲ್ಲಿ ಬ್ರಿಟಿಷರಿಗೆ ಸಲ್ಲಿಸುತ್ತಿದ್ದರಿಂದ ದೇಶದ ಆರ್ಥಿಕ ಬೆಳವಣಿಗೆ ತೃಪ್ತಿಕರವಾಗಿರಲಿಲ್ಲ ಹೆಟ್ನೆ ಗ್ರಂಥದಲ್ಲಿ ಉಲ್ಲೇಖಿಸಿರುವ ಈ ವಾಕ್ಯ ಅವರ ವಾದವನ್ನು ಎತ್ತಿತೋರಿಸುತ್ತದೆ.

Mysore's educational schemes, industrial efforts, commercial progress, research work, village reconstruction encouragement of art, improvement of other their civil and other services and reduction of unemployment are all blocked by this solvent stern and relentless exaction of the Central Government which almost reminds one of the cnowth collection in the days of the Marathas

ಮೈಸೂರು ರಾಜ್ಯ ೧೯ ಮತ್ತು ೨೦ನೆಯ ಶತಮಾನದಲ್ಲಿ ಯಾವುದೇ ಕ್ಷೇತ್ರದಲ್ಲಿ ಪ್ರಗತಿಯನ್ನು ಸಾಧಿಸಲಾರದೇ ಹೋಯಿತೆಂಬ ಕಟುಟೀಕೆ ಉತ್ಪ್ರೇಕ್ಷೆಯಂತೆ ಕಂಡರೂ ವಸಾಹತುಶಾಹಿಯ ಮುಷ್ಟಿಯಲ್ಲಿ ಭಾರತೀಯ ಸಂಸ್ಥಾನಗಳು ಅನುಭವಿಸಿದ ನಷ್ಟಗಳನ್ನು ಪ್ರತಿಬಿಂಬಿಸುತ್ತದೆ. ಇಂತಹ ಇತಿಮಿತಿಗಳ ನಡುವೆಯೂ ಮೈಸೂರಿನ ದೊರೆಗಳು ಮತ್ತು ದಿವಾನರು ಉತ್ತಮವಾದ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಿದ್ದರು. ಪ್ರಜೆಗಳ ಸುಖವೇ ತಮ್ಮ ಸುಖವೆಂದು ಭಾವಿಸಿದ್ದರು. ರಾಜ್ಯದಲ್ಲಿ ಶಾಂತಿಸಮೃದ್ಧಿಯನ್ನು ತರಲು ಪ್ರಯತ್ನಿಸಿದರು. ಸಾಕಿ ತನ್ನ Making of History ಗ್ರಂಥದಲ್ಲಿ ಬ್ರಿಟಿಷ್ ವಸಾಹತುಶಾಹಿಯ ಕಾರ್ಯವನ್ನು ಎತ್ತಿತೋರಿಸುವುದಲ್ಲದೆ, ಮೈಸೂರು ಇತಿಹಾಸದಲ್ಲಿ (feudal element) ಊಳಿಗಮಾನ್ಯದ ಅನಾಹುತವನ್ನೂ ವಿವರಿಸುತ್ತಾನೆ.

ಮೈಸೂರಿನ ಇತಿಹಾಸ ಹೀಗೆ ಸೈದ್ಧಾಂತಿಕ ವಾಗ್ವಾದಗಳಿಗೆ ಸಿಕ್ಕಿ ನಲುಗಿದೆಯಾದರೂ ಅನೇಕ ದೇಶೀಯ ಮತ್ತು ವಿದೇಶಿಯರ ಗಮನವನ್ನೂ ಸೆಳೆದಿದೆ. ಮೈಸೂರು ರಾಜ್ಯದ ಇತಿಹಾಸ ಗ್ರಂಥಗಳ ಪರಾಮರ್ಶನ ಮಾಡುವುದು ನನ್ನ ಉದ್ದೇಶವಲ್ಲ. ಆದರೆ ಈ ನಿಟ್ಟಿನಲ್ಲಿ ಇನ್ನೂ ಬಹಳಷ್ಟು ಕೆಲಸ ನಡೆಯಬೇಕಾಗಿದೆ ಎಂಬ ಅಂಶವನ್ನೂ ಇಲ್ಲಿ ಹೇಳಬಯಸುತ್ತೇನೆ.

ಮೊದಲನೆಯದಾಗಿ, ಒಡೆಯರ ಇತಿಹಾಸವನ್ನು ನಾವು ಸಮಗ್ರವಾಗಿ ಅಧ್ಯಯನ ಮಾಡಿ, ಇತಿಹಾಸವನ್ನು ರಚಿಸದಿರುವುದು ದುರದೃಷ್ಟಕರ. ಮೈಸೂರು ರಾಜ್ಯದ ಸ್ಥಾಪನೆ, ಅಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ ಹಿನ್ನೆಲೆ, ರಾಜ್ಯದ ಸ್ಥಾಪಕರ ವ್ಯಕ್ತಿತ್ವ ಮತ್ತು ಸಾಧನೆಯನ್ನೂ ನಿರೂಪಿಸುವ ಗ್ರಂಥಗಳಿಲ್ಲ. ವಿಜಯನಗರದಿಂದ ೧೬ನೆಯ ಶತಮಾನದ ಅಂತ್ಯದಲ್ಲಿ ಅಧಿಕಾರ ಹೇಗೆ ಒಡೆಯರ ಸಂತತಿಗೆ ಹಸ್ತಾಂತರವಾಯಿತು. ವಿಜಯನಗರ ಸಾಮ್ರಾಜ್ಯದ ಹಾಗೂ ಪರಂಪರೆಯ ಉತ್ತರಾಧಿಕಾರಿಯಾಗಿ ಮೈಸೂರು ಹೊರಹೊಮ್ಮಿದ ಸಂದರ್ಭವನ್ನೂ ಸ್ಪಷ್ಟವಾಗಿ ಚಿತ್ರಿಸಬೇಕಾಗಿದೆ.

ಈ ನಿಟ್ಟಿನಲ್ಲಿ ಪತ್ರಾಗಾರ ಹಾಗೂ ಸಾಹಿತ್ಯಕ ಆಧಾರಗಳ ಸಮಗ್ರ ಪರಿಶೀಲನೆ ಅಗತ್ಯವೆಂದು ಭಾವಿಸುತ್ತೇನೆ. ಸರ್ಕಾರದ ದಾಖಲೆಗಳಲ್ಲದೆ ಅರಮನೆಯಲ್ಲಿ ದೊರಕಬಹುದಾದ ಎಲ್ಲ ದಾಖಲೆಗಳನ್ನು ಪರೀಕ್ಷಿಸುವುದು ಉಪಯುಕ್ತ ಎಂದೆನಿಸುತ್ತದೆ. ಮೈಸೂರು ಒಡೆಯರ ೫೦೦ ವರ್ಷಗಳ ಸಮಗ್ರ ಅಧ್ಯಯನಕ್ಕಾಗಿ ಒಂದು ಒಡೆಯರ್ ಅಧ್ಯಯನ ಕೇಂದ್ರ Wodeyar Studies Institute ಎಂಬ ಸಂಸ್ಥೆಯನ್ನು ಸ್ಥಾಪಿಸುವುದು ಅಗತ್ಯವೆಂಬ ಸಲಹೆಯನ್ನು ಈ ಸಂದರ್ಭದಲ್ಲಿ ನಿಮ್ಮ ಮುಂದೆ ಇಡಲು ಇಚ್ಚಿಸುತ್ತೇನೆ.

ಹಾಗೆಯೇ ನಾಡಿನ ಸ್ವಾತಂತ್ರ್ಯ ಸಂಗ್ರಾಮ, ಏಕೀಕರಣ ಚಳವಳಿ ಮೊದಲಾದ ಬೆಳವಣಿಗೆಗಳನ್ನು ಕುರಿತು ಆಳವಾದ ಅಧ್ಯಯನ ಕೈಗೊಳ್ಳಲು ವಿಪುಲವಾದ ಅವಕಾಶಗಳಿವೆ.

ರಾಜಕೀಯ ಇತಿಹಾಸ ಮಾತ್ರವಲ್ಲದೆ ಸಾಮಾಜಿಕ ಜೀವನವನ್ನು ಕುರಿತು ಅಧ್ಯಯನವನ್ನು ವಿದ್ವಾಂಸರು ಕೈಗೊಳ್ಳಬೇಕಾಗಿದೆ. ಹಲವಾರು ಸಾಮಾಜಿಕ ವರ್ಗಗಳು, ಸಂಸ್ಥೆಗಳು, ಪದ್ಧತಿ, ಜೀವನ ವಿಧಾನವನ್ನು ನಾವು ಗಂಭೀರವಾಗಿ ಅಧ್ಯಯನ ಮಾಡುವುದು ಅವಶ್ಯವಾಗಿದೆ. ಉದಾಹರಣೆಗಾಗಿ ಮೈಸೂರಿನ ಅನೇಕ ಜನಾಂಗಗಳ ಅಧ್ಯಯನ ಇನ್ನು ನಡೆದಿಲ್ಲ. ಅವುಗಳಲ್ಲಿ ಅರಸು ಜನಾಂಗದ ಆಳವಾದ ಅಧ್ಯಯನವನ್ನು ಕೈಗೊಂಡು ಗ್ರಂಥರೂಪದಲ್ಲಿ ಅದನ್ನು ಪ್ರಕಟಿಸಲು ವ್ಯವಸ್ಥೆಮಾಡಬೇಕಾಗಿದೆ.

ಮೈಸೂರು ಇತಿಹಾಸದ ರಚನೆಯಲ್ಲಿ ಹಲವಾರು ಘಟ್ಟಗಳನ್ನು ಗುರುತಿಸಬಹುದಾಗಿದೆ. ಸ್ವಾಭಾವಿಕವಾಗಿಯೇ ಪ್ರಾರಂಭದ ಕೃತಿಗಳು ರಾಜಕೀಯ ಚರಿತ್ರೆಗೆ ಮೀಸಲಾಗಿವೆ. ನಮ್ಮಲ್ಲಿ ಲಭ್ಯವಿದ್ದ ಬಹಳಷ್ಟು ಮೂಲ ಆಧಾರಗಳನ್ನು ಹಿಂದಿನ ಇತಿಹಾಸಕಾರರು ಬಳಸಿಕೊಂಡಿದ್ದರು, ಮತ್ತೊಮ್ಮೆ ಮೂಲ ಆಧಾರಗಳನ್ನು ಪರಿಶೀಲಿಸುವುದು ಅಗತ್ಯವಿದೆ. ರಾಜ್ಯ ಪತ್ರಾಗಾರ ಹಾಗೂ ಖಾಸಗಿ ಪತ್ರಾಗಾರಗಳ ಪೂರ್ಣ ಸದ್ಬಳಕೆ ಆಗಬೇಕಾಗಿದೆ. ಬಹುಮುಖ್ಯವಾಗಿ ಬ್ರಿಟಿಷ್ ಪತ್ರಾಗಾರದ ಆಧಾರಗಳು ಮದ್ರಾಸು ದೆಹಲಿಯ ರಾಷ್ಟ್ರೀಯ ಪತ್ರಾಗಾರದ ದಾಖಲೆಗಳನ್ನು ಪೂರ್ಣವಾಗಿ ಉಪಯೋಗಿಸಿಕೊಂಡಿಲ್ಲ. ಲಂಡನ್ನಿನಲ್ಲಿರುವ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿರುವ ಅಪಾರ ಪ್ರಮಾಣದ ದಾಖಲೆಗಳನ್ನು ಬಳಸಿಕೊಂಡು ಮೈಸೂರು ರಾಜ್ಯದ ಇತಿಹಾಸವನ್ನು ಪುನರ್ರಚಿಸಬೇಕಾಗಿದೆ.

ಫ್ರಾನ್ಸ್‌ನ ಆನಲ್ಸ್(Annals) ಮಾದರಿಯಲ್ಲಿ ಮೈಸೂರಿನ ಆರ್ಥಿಕ ಹಾಗೂ ಸಾಮಾಜಿಕ ಇತಿಹಾಸ ರಚನೆಯಂತಹ ಮಹತ್ಕಾರ್ಯವನ್ನು ನಮ್ಮ ವಿದ್ವಾಂಸರು ಕೈಗೊಳ್ಳಬೇಕಾಗಿದೆ. ವಿವರಣಾತ್ಮಕ ಇತಿಹಾಸ ರಚನೆಯಿಂದ ವಿಶ್ಲೇಷಣಾತ್ಮಕ ಇತಿಹಾಸ ರಚನೆಗೆ ನಾವು ಬದಲಾಗಬೇಕಾಗಿದೆ ಎಂಬ ಸತ್ಯವನ್ನು ನಾವು ಮನಗಾಣಬೇಕು. ಮೈಸೂರು ಜಿಲ್ಲೆಯ ಪ್ರಾಚೀನ ಇತಿಹಾಸದ ಪುನರ್ರಚನೆಯು ತುರ್ತಾಗಿ ಆಗಬೇಕಾದ ಕಾರ್ಯ. ಇದಕ್ಕಾಗಿ ಹಲವಾರು ಪ್ರಮುಖ ಪ್ರಾಚೀನ ನೆಲೆಗಳನ್ನು ಗುರುತಿಸಿ ಅಲ್ಲಿ ಭೂ ಉತ್ಖನನವನ್ನು ಕೈಗೊಳ್ಳಬೇಕಾಗಿದೆ ಇಲ್ಲದಿದ್ದರೆ ಅಲ್ಲಿನ ಕುರುಹುಗಳು ನಾಶವಾಗುವ ಸಂಭವವಿದೆ.

ಇತ್ತೀಚೆಗೆ ಬಳಕೆಯಲ್ಲಿರುವ ಕಂಪ್ಯೂಟರ್, ಇ ಮೇಲ್ ಮೊದಲಾದ ತಂತ್ರಜ್ಞಾನದ ಆವಿಷ್ಕಾರಗಳನ್ನು ಬಳಸಿಕೊಂಡು ಮೈಸೂರಿನ ಇತಿಹಾಸವನ್ನು ಶ್ರೀಮಂತಗೊಳಿಸಬೇಕಾಗಿದೆ.

ಅತ್ಯಂತ ಮಹತ್ವ ಪೂರ್ಣವಾದ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿರುವ ಮೈಸೂರು ತನ್ನ ರತ್ನ ಗರ್ಭದಲ್ಲಿ ಇನ್ನೂ ಅದೆಷ್ಟು ವಿಸ್ಮಯಗಳನ್ನು ಅಡಗಿಸಿಕೊಂಡಿದೆ ಅವುಗಳನ್ನು ಹೊರತೆಗೆದು ಮೈಸೂರು ಜಿಲ್ಲೆಯ ಸರ್ವಾಂಗ ಸುಂದರ ಸಮಗ್ರ ಚಿತ್ರವನ್ನು ನೀಡಲು ನಾವು ಪ್ರಯತ್ನಿಸೋಣ.

